ಕೈಲಾಸಂ ಕಲ್ಪನೆ

# ಶಂಬರನ ಶೃಂಗಾರ

ಅಥವಾ

ಮುಟ್ಟುಗಳಿಗೆ ಮುಟ್ಟು

ಅಥವಾ

## ಹಾಡುಗಳ ಹುಳಿಕರಣಿ

ಒಟ್ಟಿನಲ್ಲಿ

## ವಿವಿಧ ವಿನೋದಾವಳಿ

ಬಿ. ಎಸ್. ರಾಮರಾವ್

# ಕೈಲಾಸಂ ಕಲ್ಪನೆ

# ಶಂಬರನ ಶೃಂಗಾರ

ಅಥ್ವಾ

## ಮುಟ್ಟುಗಳಿಗೆ ಮುಟ್ಟು

ಅಥ್ವಾ

# ಹಾಡುಗಳ ಹುಳಿಕರಣೆ

ಒಟ್ಟಿನಲ್ಲಿ

# ವಿವಿಧ ವಿನೋದ್ಯಾವಳಿ



ಬರೆಹ–ಪ್ರಕಟಣೆ

ಬಿ. ಎಸ್. ರಾಮರಾವ್

೨೯೮/ಬಿ ೩೫ ನೆಯ ಕ್ರಾಸ್, ೪ ನೆಯ ಬ್ಲಾಕ್,

ಜಯನಗರ, ಬೆಂಗಳೂರು-೧೧

ಮೊದಲ ಮುದ್ರಣ ೧೯೫೧

ನಗುವ-ನಂದ ವಾರಪತ್ರಿಕೆಯ ದೀಪಾವಳಿ ವಿಶೇಷ ಸಂಚಿಕೆ

ಸಂಪಾದಕ . ಬಿ. ರಂಗನಾಥರಾವ್ } ಪುಟ ೯೩<br>
ಸಂಚಾಲಕ : ರಾಘವೇಂದ್ರ } ರಿಂದ ೧೧೯

ಇದೀಗ ಎರಡನೆಯ ಮುದ್ರಣ ಬೇರೆ ಹೊತ್ತಿಗೆಯಾಗಿ ೨೦ ವರುಷ ಕಳೆದ

೧೯೭೧ ನವೆಂಬರು ಕೈಲಾಸಂ ೨೫ ನೆಯ ಪುಣ್ಯತಿಥಿಯಂದು



**ಬೆಲೆ : ಎರಡೂವರೆ ರೂಪಾಯಿ**

ಮುದ್ರಣ :

ಶ್ರೀ ಶಂಕರ ಪ್ರಿಂಟಿಂಗ್ ವರ್ಕ್ಸ್,

ಜಯನಗರ, ಬೆಂಗಳೂರು-11



[ಕೊನೆಯ ಪುಟದಲ್ಲಿನ ಎರಡು ಲೇಖನಗಳು, "ಬಿ. ವಿ. ಕೆ. ಶಾಸ್ತ್ರಿ (ಮುರಲಿ)", ಮತ್ತು "ಸಂಪಾದಕ" ರಿಂದ ಪ್ರಜಾವಾಣಿ ದಿನಪತ್ರಿಕೆಯಲ್ಲಿ ೧೯೫೪ನೆಯ ಇಸವಿಯಲ್ಲಿ ಪ್ರಕಟವಾದವು. ಆ ಪತ್ರಿಕೆಯ ಸಂಪಾದಕರು ಮಾನ್ಯ ಶ್ರೀ ಟಿ. ಎಸ್. ರಾಮಚಂದ್ರರಾಯರ courtesy ಇಂದ ಇಲ್ಲಿ ಪುನಃ ಮುದ್ರಿಸಿದೆ.

ಈ ಹೊತ್ತಿಗೆಗೆಂದೇ ಬರೆದ ಇನ್ನೆರಡು ಲೇಖನ ಶ್ರೀ ಹೆಚ್. ವಿ. ವೆಂಕಟಸುಬ್ಬಯ್ಯ ಮತ್ತು ಶ್ರೀ ಕೆ. ಎನ್. ಶ್ರೀನಿವಾಸಮೂರ್ತಿ ಇವರಿಂದ. ಈ ಇಬ್ಬರು ಅಕೌಂಟ್ಸ್ ಆಫೀಸರು ಕೈಲಾಸಂ ಜತೆಗಿದ್ದು ಅನುಭವಿಸಿದ ರಸನಿಮಿಷಗಳ ನೆನಪು ಮಾಡಿಕೊಟ್ಟಿದ್ದಾರೆ. ಇವರಿಗೆ ಸಂಪಾದಕನ ಕೃತಜ್ಞತೆ ಇದೆ.

ಇಲ್ಲಿನ ಪಡಿಯಚ್ಚು ಪ್ರಸಿದ್ಧ ನಾಟಕಕಾರ ಶ್ರೀ ದಾಶರಥಿ ದೀಕ್ಷಿತರು ತಮ್ಮ "ಗಾಂಪ" ರ ಗುಂಪು ಜೊತೆ ಮತ್ತು ಇತರ ಮಿತ್ರರೊಡನೆ ಅಭಿನಯಿಸಿ ಪ್ರೇಕ್ಷಕರ ಮೆಚ್ಚುಗೆ ಗಳಿಸಿ 'ಷೀಲ್ಡ್' ಸಂಪಾದಿಸಿದ 'ನಂಕಂಪ್ನಿ' ನಾಟಕದ ದೃಶ್ಯಗಳು.]



## ಪಾ ತ್ರ ಗ ಳು

ಸೂತ್ರಧಾರ—ನಟಿ.

ಪಾತ್ರಧಾರಿಗಳು—ಮೂರ್ತಿ, ಸುಬ್ಬು, ರಂಗು.

| | |
|---|---|
| ಶಂಬರ | ಬೋರ, ಬೋರಿ |
| ವಿದೂಷಕ | ಬೀರ, ಬೀರಿ |
| ರತಿ | ಮಾರ, ಮಾರಿ |
| ಶಸ್ತ್ರಧಾರಿ | |
| ನೇಗಿಲಯೋಗಿ | ಸ್ಯಾನಿಟರಿ ಇನ್‌ಸ್ಪೆಕ್ಟರು |
| " ಸಿಂಹ " | ಪೋಲೀಸ್ ,, |
| ಮಹಾರಾಣಿ | ಅಯ್ಯರು, ಇಬ್ಬರು |
| ಇತರ ಪರಿವಾರ | ಮಿತ್ರರು ಇತರರು |

— ಪ್ರೇಕ್ಷಕರು —

# ಶಂಬರನ ಶೃಂಗಾರ

## ನಾಂದೀ ದೃಶ್ಯ

[ರಂಗಭೂಮಿಯು ಏರ್ಪಾಡು | ಅ | ಆ | ಈ ರೀತಿ ಇದೆ. ಎಡಗಡೆ 'ಅ' ರಂಗದ ಅರ್ಧದಲ್ಲಿ 'ಗ್ರೀನ್ ರೂಂ.' ಬಲಗಡೆ 'ಆ'ದಲ್ಲಿ ನಾಟಕ ಪ್ರದರ್ಶನ. 'ಆ' ಪರದೆ ಎತ್ತಿದ್ದಾಗ 'ಅ' ಪರದೆ ಬಿದ್ದಿರುತ್ತದೆ. 'ಆ' ಪರದೆ ಬಿದ್ದಿದ್ದಾಗ, 'ಅ' ಪರದೆ ಎದ್ದಿರುತ್ತದೆ. ಗ್ರೀನ್ ರೂಮಿನಿಂದ 'ಆ' ರಂಗಕ್ಕೆ ಬರಲು ಹೋಗಲು ಅಡ್ಡಗೋಡೆಯಂತೆ ಪರದೆ ಇದ್ದು ದ್ವಾರಗಳಿರುತ್ತವೆ. 'ಆ' ರಂಗದಲ್ಲಿ ಒಂದರ ಹಿಂದೊಂದು ಪರದೆಗಳೂ ಅಂಕದ ಪರದೆಯೂ ಇದೆ ಗ್ರೀನ್ ರೂಮಿಗೆ ಒಂದೇ ಪರದೆ. ಆದರೆ ಸೊಳ್ಳೆಪರದೆಯಂತೆ ಇದ್ದು ಒಳಗೆ ನಡೆಯುವುದೆಲ್ಲ ಸ್ವಲ್ಪ ಸ್ವಲ್ಪ ಕಾಣುತ್ತದೆ. ರಂಗಭೂಮಿಯ ಮುಂದೆ 'ಪಿಟ್' ಇದ್ದು ವಾದ್ಯಗಾರರು, ದೀಪಕ್ಕೆ ಬಣ್ಣದ ಕಾಗದ ಹಾಕುವವರು, ಸ್ವಿಚ್‌ಹಾಕಿ ಆರಿಸುವವರು ಕೂರುವುದಕ್ಕೆ ಜಾಗಮಾಡಿದೆ.]

[ 'ಅ' ಮತ್ತು 'ಆ' ರಂಗವೆರಡನ್ನೂ ಮುಚ್ಚಿರುವ ದೊಡ್ಡ ಅಂಕದ ಪರದೆ ಎದ್ದರೆ ನಾಟಕವಾರಂಭವಾದಂತೆ. ಪ್ರೇಕ್ಷಕರು ನೆರೆದ ಕೂಡಲೆ ನಾಟಕಾರಂಭ ಸೂಚನೆಯ ಗಂಟೆ ಐದೈದು ನಿಮಿಷಕ್ಕೊಂದು ಸಲ ಬಾರಿಸಲ್ಪಟ್ಟು 3ನೆಯ ಸಲ ಬಾರಿಸಿದೊಡನೆ 'ಪಿಟ್' ನಲ್ಲಿದ್ದ ವಾದ್ಯಗಾರರಿಂದ ಸಂಗೀತ ಆರಂಭವಾಗಿ ಮೊಳಗುತ್ತದೆ. "ಎಲ್ಲಿರುವೆ ತಂದೆ ಬಾರೋ ಮಾರುತಿ" ಹಾಡನ್ನು ಸಂಗತಿಗಳೊಡನೆ ಬಾರಿಸಲಾಗುವುದು. ಕೊನೆಯ ಸಂಗತಿ ಮುಗಿವ ಹೊತ್ತಿಗೆ ತಬಲಾ ಮುಕ್ತಾಯದ ಏಟಿಗೆ ಸರಿಯಾಗಿ ದೊಡ್ಡ ಅಂಕದ ಪರದೆ ಏಳುವುದು.

ಗ್ರೀನ್ ರೂಮಿನಲ್ಲಿ ಎಲ್ಲರೂ 'ಮೇಕಪ್' ಮಾಡಿಕೊಳ್ಳುತ್ತ ಪೋಷಾಕು ಹಾಕಿಕೊಳ್ಳುತ್ತಿದ್ದಾರೆ. ಹೆಂಗಸರ ಪಾತ್ರದವರು ಚಲ್ಲಣಗಳನ್ನು ಹಾಕಿಕೊಂಡು ಕುಪ್ಪಸ ತೊಟ್ಟು ಎದೆಗೆ ಚೆಂಡುಗಳನ್ನು ಕಟ್ಟಿಕೊಳ್ಳುತ್ತಿರುವರು.]

ಸೂತ್ರಧಾರನ ಪಾತ್ರಕ್ಕೆ ಸಿದ್ಧನಾಗುತ್ತಿರುವವನನ್ನು ಕುರಿತು ಸ್ತ್ರೀ ಪಾತ್ರಧಾರಿ ಒಬ್ಬ :

" ಮೂರ್ತಿ ಲೇ ! ಸೇಫ್ಟೀ ಪಿನ್ನೆಲ್ಲವಾ, ಈ ಬ್ರೆಸ್ಟ್ ಬಾಲ್ಸ್ ನಿಲ್ಲೋದೇ ಇಲ್ಲವಲ್ಲೊ ? "

**ಮೂರ್ತಿ**—ಲೋ, ರಂಗೂ! ನೀ ಮಾಡೋ ಸುಹಾ ಹೆಣ್ಣು ಪಾರ್ಟಿಗೆ ಬ್ರೆಸ್ಟ್‌ಬಾಲ್ಸ್ ಬೇರೇ ಏನೋ? ಅಲ್ಲಿರೋ ಆ ಹರಕಲು ಬಟ್ಟೆ ಉಂಡೆ ಮಾಡಿ ತುರುಕ್ಕೊಂಡು ಒಂದು ತುಂಡು ಬಟ್ಟೆ ಭದ್ರವಾಗಿ ಬಿಕ್ಕೊಂಡು ಮೇಲೆ ಕುಪ್ಪಸ ತೊಟ್ಟುಕೊಳ್ಳೋ.

**ರಂಗೂ**—ಲೋ, ನಟಿಪಾರ್ಟೋ! ಪರದೇ ಎತ್ತುತ್ತಲೂ ಕಾಣಿಸೋದು ನಾನೇ, ಸರಿಯಾಗಿರಬೇಡವೇನೋ? ಕೊಡೋ ಎರಡು ಸೇಫ್ಟೀ ಪಿನ್ನೊಂದ್ರೆ?

**ಮೂರ್ತಿ**—ಪರದೆ ಎತ್ತುತ್ತಲೂ ಯಾರೂ ಕಾಣಿಸೊಲ್ಲಾ. ಎಂಟಿ ರಾದರೆ ಸೂತ್ರಧಾರ ನಾನೆ. ಹೇಳಿದಷ್ಟು ಮಾಡೋಂದ್ರೆ? ನೀ ಮಾಡೋ ನಟೀ ಪಾರ್ಟಿಗೆ ಸೇಫ್ಟೀಪಿನ್ನು ಬೇರೆ!

**ರಂಗೂ**— ಸರೀ! ಯಾವಾಗಿನ್ನಾಗೇ ಈ ಹೊತ್ತು. ಒಳ್ಳೇ ಹಿಡಿಂಬನ ಹಟ ನಿನ್ನ ಹಟ. ಸ್ವರೀ! ಇನ್ನು ಕಿರ್ಲೇನ್ಸ್ವಯೋಜ್ನ. ಇಲ್ಲಿ ಕಿರಲಿಬಿಟ್ಟು ಪೀಪೀ ಪಾಚೊಂಬಿಟ್ರೆ ಆಡಿಯನ್ಸಿಂದ ಪಾಪಾಸ್ ಬೀಳತ್ತೃಷ್ಟೇ. ಹೇಗೋ ಏಗಬೇಕು. ಸುಬ್ಬೂಲೀ! ಆ ರತೀ ಪಾರ್ಟಿನ್ ಟೈಟ್ ಕುಪ್ಪಸ ತೊಡಿಸೋ, ಈ ಚಿಂದೀ ಬ್ರೆಸ್ಟ್‌ಸಿಗೇ. ಇನ್ನೂ ಕಂಡರೆ ಸೆರಗಿನಿಂದ ಪೂರ್ತಿ ಮುಚ್ಚಿಕೊಂಡ್ರೆ ಆಯ್ತು.

**ಸುಬ್ಬು**—ರತೀ ಪಾರ್ಟಿಂದು ಕುಪ್ಪಸ ನಿಂಗೆ ಕೊಟ್ಟುಬಿಟ್ಟು ನಾನು ಬರೀ ಬಾಡಿ ಬಿಕ್ಕೊಂಡು ಬರ್ಲೇ? ಒಳ್ಳೇ ಗಿರಾಕಿ ನೀನು! ಇಪ್ಪಾಗಿ ನಟೀ ಪಾರ್ಟಿಗೇನು, ಹ್ಯಾಗಿದ್ದರೂ ಆಯಿತು. ನನ್ನ ನೋಡೋ! ಮೊದಲು 'ರತಿ' ಆಮೇಲೆ 'ಅಪ್‌ಟುಡೇಟ್ ಅಮ್ಮಯ್ಯಾ', ಎರಡರಲ್ಲೂ ಸೆರಗು ಮುಚ್ಚ್ಕೋಹಾಗಿಲ್ಲ. ನಿಂಗೇನು? ನೀನೇ ಅಂದ್ಹಾಗೆ ಸೆರಗಿನಲ್ಲಿ ಮ್ಕೆ ಮುಚ್ಚಿಕೋ.

**ರಂಗೂ**—ಅಲ್ಲಾ ಕಣೋ! ನಾನು ಉಟ್ಕೊಂತಾ ಇರೋದು ಸೀರೆ ಅಲ್ಲಾ. ಲಂಗದ ಮೇಲೆ ಹೊಲಿದಿರೋ ದಾವಣಿ. ಇದರ ಸೆರಗು ಹೊಂದೇ ಯಾವಾಗಲೂ. ಇದರಲ್ಲೇನು ಮುಚ್ಕೊಳೋದೋ? ನಿನ್ನೆರಡೂ

ಪಾರ್ಟಿಗೂ ಸರಿಹೋಗುತ್ತೆ ಇದು. ನಿನ್ನ ಸೀರೆ ನಂಗೆ ಕೊಡಪ್ಪಾ ಲೋ ದಮ್ಮಯ್ಯಾ !

ಸುಬ್ಬು—ತಕ್ಕೊಂಡು ಹಾಳಾಗ್ಹೋಗು ! ಅಂಕದ ಪರ್ದೆ ಎತ್ತಿಬಿಡತ್ತೆ ಇನ್ನು. ಬೇಗ ಸುತ್ತಿಕೊಂಡು ತೊಲಗು.

(ರಂಗುವಿನ ಕಡೆ ತಾನು ಉಡುತ್ತಿದ್ದ ಸೀರೆ ಬಿಚ್ಚಿ ಎಸೆಯುವನು. ತಾನು ಅರೆಬೆತ್ತಲೆಯಾಗುವನು. ರಂಗುವು ಇದನ್ನು ಸೀರೆಯನ್ನು ತನ್ನ ದಾವಣಿಯ ಮೇಲೇ ಸುತ್ತಿಕೊಳ್ಳುವನು. ಸೀರೆ ಬಿಚ್ಚಿದಾಗ ಫ್ಯಾಷನ್ ಸವರಿದ್ದನ್ನು ನೋಡಿಕೊಳ್ಳಲು ಕನ್ನಡಿಯ ಹತ್ತಿರ ಸುಬ್ಬು ಹೋಗುವನು. ಅಷ್ಟರಲ್ಲಿ ನಾಟಕ ಪ್ರಾರಂಭವಾಗುವ ಬೆಲ್ ಆಗುವುದು ಸೂತ್ರಧಾರ ಮೂರ್ತಿ ಬಂದು ರಂಗು ನಟಿಯನ್ನು ತಳ್ಳುತ್ತ)

ಮೂರ್ತಿ—ನಡಿಯೋಲೇ ಬೆಲ್ ಆಯಿತು. ಸೈಡ್ ವಿಂಗ್ಸಲ್ಲಿ ನಿಂತಿರು. ಕರೀತ್ಲೂ ಬಾ. ಸಾಕು ನಿನ್ನ ಅಲಂಕಾರ. ನೀನೋ ನಿನ್ನ ಬ್ರೆಸ್ಟ್ ಬಾಲ್ಸೋ, ಅಲ್ಲವೋ ಒಳ್ಳೇ ಗುಡಾಣದ್ಹಾಗೆ ಸುತ್ತಿಕೊಂಡಿದೀಯಲ್ಲೋ ಸೀರೇ ! ಕುತ್ತಿಗೆಯಿಂದ ಕಾಲಿನವರೆಗೆ ಒಳ್ಳೇ ಸಿಮೆಂಟ್ ಮೂಟೆ ನಿಲ್ಲಿಸಿದ ಹಾಗೇ ! ಅದರ ಮೇಲೆ ತಂಬಿಗೆ ಕವಿಚಿ ಹಾಕಿದ ಹಾಗಿದೆ ನಿನ್ನ ಮೂತಿ—ಬಾ ! ಹ್ಯಾಗಿದ್ದರೂಪೇ ತ್ಥಟ್ನೆ—ಹೊತ್ತು ಆಗೇ ಹೋಯಿತು.

[ಇಬ್ಬರೂ 'ಆ' ರಂಗಕ್ಕೆ ಬಂದು, ಸೂತ್ರಧಾರ ಮಧ್ಯೆ ಪರದೆಯ ಹಿಂದೆಯೂ ನಟಿಯು ಸೈಡ್‌ವಿಂಗ್ಸಲ್ಲೂ ನಿಲ್ಲುವರು 'ಆ' ಪರದೆ ಏಳುವುದು. ಸೂತ್ರಧಾರ ಅಂಜಲಿಯಲ್ಲಿ ಪುಷ್ಪಗಳನ್ನು ಹಿಡಿದು 'ಪಿಟ್' ಕಡೆ ನೋಡುವನು. ವಾದ್ಯಗಳಾರಂಭವಾಗುವುದು. ಶ್ರುತಿ 'ಒಂದು ಕರೀ' ಎಂದು ತೋರಿಸಲು ಯಾವ ಸಂಜ್ಞೆಯೂ ಹೊಳೆಯದೆ, ಪುಷ್ಪಗಳನ್ನು ತನ್ನ ಕರೀ ಕೋಟಿನ ಮೇಲೆ ಮೇಲಿಂದ ಕೆಳಕ್ಕೆ ಜಾರಿಸುವನು. ಆದರೆ ಅಂಜಲಿಬದ್ಧವಾದ್ದರಿಂದ ಎರಡೂ ಪೆಟ್ಟಿಟ್ಟನ್ನು ಸವರಿದ್ದರಿಂದ ಹಾರ್ಮೋನಿಯಂ 'ಎರಡೂ ಕರೀ'ಗೆ ಆರಂಭವಾಗುವುದು. ಆಡಿಯನ್ಸಲ್ಲಿ ಗದ್ದಲ ಅಡಗದಿರುವುದರ ಅವಕಾಶ ಉಪಯೋಗಿಸಿಕೊಂಡು ಸೂತ್ರಧಾರ ಪಿಟ್ಟಿನವರ ಕಡೆ ಒಂದು ಹೆಜ್ಜೆ ಮುಂದೆ ಬಂದು

"ಎರಡು ಕರೀ ಅಲ್ವೋ, ಕೇಕಡಿ, ಒಂದೂ ಕರಿ ! ಹಾಳಾಗ್ಹೋಯ್ತು !" ಅನ್ನುವನು.

ಹಾರ್ಮೋನಿಯಂ ಪರಿಯಪ್ಪ—(ಕುಳಿತಲ್ಲಿಂದಲೇ) ಟೇಜಾವ್ಯಾಗೆ ನಿಂತಾಗ ಸ್ರುತಿ ತೋರಿಸಾಕೆ ಬೆಳ್ಳನಲ್ಲಿ ಇಂಗೆ ತೋವನ್ ಸವರಿಕೋ ಅಂತ

ಏಳಿರಲಿಲ್ವಾ. ನಿಂಗ್ ತೋರ್ಪ್ಲ ಇಲ್ಲ 'ಕರೀ ಒಂದು' ಅಂತ ಏಳಾಕೆ. ಓಗ್ಲಿ, ಕೋಟು, ಲಾಂಗ್ ಕೋಟು, ಕರೇದು ಆಕ್ಕೊಂಡಿದ್ದಿಯಾ, ಅದರ ವ್ಯಾಗೆ ಒಂದು ಬೆಟ್ಟು ಸವರಿ ತೋರಿಸಬಾರದಾಗಿತ್ತಾ, ಬೇಕೂಪಾ!

**ಮೂರ್ತಿ**—ತೋರಿಸಿದ್ನಲ್ಲೋ ತಿರುಬೋಕಿ!

**ಹರಿಯಪ್ಪ**—ಏನ್ ತೋರ್ಸಿದ್ನೀನು? ಗ್ನ್ಯಾನಾ ಗೀನಾ ಐತಾ ಮ್ಯೆ ವ್ಯಾಗೆ–ಎರಡು ಎಬ್ಬೆಟ್ಟು ತೋರಸ್‌ನಿಲ್ವಾ ನೀನು ಕೋಟು ವ್ಯಾಗೆ ಸವರಿ ಕೊಂಡೂ? ಅದ್ಕೆ ಎಳ್ಡುಕರೀ ಇಟ್ಟಿದ್ದಾನೂ! ಈಗ ಕಿರಿಚಿಕೊಂಡೆಲ್ಲಾ ಒಂದು ಕರೀ ಅಂತ. ಆಗ್ಲೆ ಬಾಯಿಬಿಡಾಕೆ ಮುಂಚೇನೇ ಕಿರ್ಲಿದ್ದಿದ್ರೆ! ಅದೆಲ್ಲಾ ಎಂಗಾಗ್ತದೇ ನಿಂಗೇ? ಟೇಜು ಮೇಲೆ ನೀನು ರಾಜಾ ಪಾರ್ಟಿನೋನೂಂತ ತೋರಿಸ್ಕೋ ಬೇಡ್ವಾ! ಊ! ಸುರುಮಾಡು ಒತ್ತಾಯ್ತು, ಜನ ಕಾದವ್ರೆ! ಕರೇ ಒಂದು!

**ಮೂರ್ತಿ**—ಊ! ನಾಟಿ ರಾಗ ಬಾರಿಸು. ನೀನು ಬಾರಿಸೋದ್ರಲ್ಲಿ ಅದು ನಾಟ್ ಎ ರಾಗ (Not a raga) ಆಗಿ ಹೋಗುತ್ತೆ ಸದ್ಯ. ಹುಷಾರಾಗಿ ಆ ಮನೆಗಳು ಸುಮ್ಮನೆ ಮುಟ್ಟೋ ಸಾಕು.

**ಹರಿಯಪ್ಪ**—ನೀ ಸುರುಮಾಡಪ್ಪಾ ಕಂಡೀವ್ನಿ ಎಲ್ಲಾ. ಮನೆ ಮುಟ್ಟಿದರೆ ಕುಯ್ ಅಂತದಾ ಈ ಪೆಟ್ಟಿಗೆ? ರಿಪೇರಿ ಮಾಡಿಸಿ ಇನ್ನೊಂದು ರೀಡ್ ಆಕ್ಸೋವಾ ಅಂದರೆ ಆವೊತ್ತಿಂದ ಪಂಚಾಯಿತಿ ಅದ್ಕೆ. ಕೊಡತಿ ಎತ್ಕೊಂಡು ಬಡದರೇ ಇದು ಕೂಗೋದು. ಸುರುಮಾಡಪ್ಪ ಇನ್ನು!]

**ಸೂತ್ರಧಾರ**—ರಾಗ: ನಾಟಿ

**ಸರಸ್ವತೀ ನಮಸ್ತುಭ್ಯಂ**
**ವರದೇ ಕಾಮರೂಪಿಣಿ।**
**ನಾಟಕಾರಂಭಂ ಕರಿಷ್ಯಾಮಿ**
**ಸಿದ್ಧಿರ್ಭವತುಮೇ ಸದಾ॥**

ಸರಸ್ವತಿಯನ್ನು ಆಹ್ವಯಿಸಿದ್ದಾಯಿತು. ಇನ್ನು ಬರೀ ಸರಸ್ವತೀ ಪ್ರಸನ್ನವಾದರೇನಾದ ಹಾಗಾಯಿತು? ಲಕ್ಷ್ಮೀ ಕಟಾಕ್ಷವಿಲ್ಲದೆ ಪ್ರಪಂಚ ನಡೆಯುವುದು ಹೇಗೆ? ಲಕ್ಷ್ಮೀದೇವಿಯನ್ನು ಭಜಿಸುವಾ.

**ಲಕ್ಷ್ಮೀ ಹೇ ನಮಸ್ತುಭ್ಯಂ**
**ವರದೇ ಕಾಮರೂಪಿಣಿ ।**
**ನಾಟಕಾರಂಭಂ ಕರಿಷ್ಯಾಮಿ**
**ಸಿದ್ಧಿರ್ಭವತುಮೇ ಸದಾ ॥**

(ಅಂಜಲಿಯ ಪುಷ್ಪಗಳನ್ನು ಸಭಾಸದರ ಕಡೆಗೆ ಎರಚಿ ಕೈಮುಗಿದು ತೋರ್ಬೆರಳನ್ನೂ ಮಧ್ಯಬೆರಳನ್ನೂ ಕೋಟಿನ ಮೇಲೆ ಸವರಿ 'ಕರೀ ಎರಡು' ಶೃತಿಯೆನ್ನುವನು: ಶೃತಿ ಬದಲಾಯಿಸಿ ಹರಿಯಪ್ಪ ಆವರ್ತ ಹಿಡಿದಾಗ)

**ಗ್ಯಾಲರಿ ಪ್ರೇಕ್ಷಕರಲ್ಲೊಬ್ಬ**-- ಜಯಜಯ ಗೋಕುಲ ಬಾಲ ಹಾಡು ಮೂರ್ತಪ್ಪೋ !

(ಆ ಕೂಗಿಗೆ ಗಮನಕೊಡದೆ ಸೂತ್ರಧಾರ)

ರಾಗ : ಕಮಾಚು

**ಸುಜನ ಜೀವನಾ ರಾಮ ಸುಗುಣಭೂಷಣಾ । ರಾಮಾ । !**

**ಪ್ರೇಕ್ಷಕ**—ಲೇ ಮೂರ್ತಪ್ಪಾ ! ಜಯಜಯ ಗೋಕುಲಬಾಲ ಹಾಡೋ ಅಂದ್ರೆ ಏನೋ ಎತ್ತ್ತಾನೆ ರಾಗ ! ಹಾಡೋ ಜಯಜಯ ಗೋಕುಲಬಾಲ !

**ಮತ್ತೊಬ್ಬ ಪ್ರೇಕ್ಷಕ**—ಅಡೇ ಅದೆಲ್ಲಾ ವಾಣಾ ! ಅಂದ ಬಂಗೇರುಹಾ ಪಾಡರಾಡೇ ಮೂರ್ತಿಯಪ್ಪಾ—'ಬಂಗೇರುಹಾ' ಪಾಡು !

[**ಸೂತ್ರಧಾರ**—(ಕಕ್ಕಾಬಿಕ್ಕಿಯಾಗಿ ಹರಿಯಪ್ಪನ ಕಡೆ ನೋಡಿ)

ಈಗೇನೋ ಮಾಡೋದು ನಾನು ! ಅವನು ಜಯಜಯ ಗೋಕುಲ ಬಾಲ ಅಂತಾನೆ. ಇವನು 'ಬಂಗೇರುಹಾ' ಅಂತಾನೆ. ಯಾವುದು ಹಾಡಲಿ !?

**ಹರಿಯಪ್ಪ**—ಯಾವುದಾದ್ರೇನೋ ? ಅಂಗೇ ಎತ್ಕೊ ! ಬದಲಾಯಿಸಿ ಕೊಂತೀನಿ ಸ್ರುತಿ ! ರಾಗ ಒಂದೇ ತಾನೇ ! ಜಯಜಯ ಗೋಕುಲ ಎಳ್ಡು ಸಾರಿ ಅಂಗಂದುಬಿಟ್ಟು ಆ "ಪಂಕೇರುಹಾಸ—ನಾಸೀನುಡೈನ" ಭಿರಕಾಯ್ಸು. ಇಬ್ಬರೂ ತೆಪ್ಪಗಾಗ್ತಾರೆ.

**ಸೂತ್ರಧಾರ**—ಹಾಗೇ ಆಗ್ಲೋ. ಕಮಾಚು ಮುಗಿಸಿ ಆಮೇಲೆ 'ಪಂಕೇರುಹಾಕ್ಕೆ' ಹೋಗೋಣೋ ! ಈಗಲೇ ಶೃತಿ ಬದಲಾಯಿಸಬೇಡ.]

(ಚರಣವನ್ನೆತ್ತಿ ಮುಗಿಸುವಷ್ಟರಲ್ಲಿ)

ಮೊದಲನೇ ಪ್ರೇಕ್ಷಕ—ಓ! ಇವ್ರು ಒಳ್ಳೇ ಮಾತಿಗ್ಯಾಡೋದಿಲ್ಲ ಇಲ್ರಿ. ಲ್ರೋ! (ಸುತ್ತಲಿದ್ದ ತನ್ನ ಮಿತ್ರರಿಗೆ) ಷುರು ಮಾಡ್ರೋ!

ಜಯಜಯ ಗೋಕುಲಬಾಲ್ಯ ಹಾಡೂ ಮೂರ್ತಪ್ಪಾ!

(ಕೆಲವರು ಒಟ್ಟಿಗೆ) ಜಯಜಯ ಗೋಕುಲಬಾಲ. ಹಾಡೂ ಮೂರ್ತಪ್ಪಾ!

(ಅದಕ್ಕೆ ಸರಿಯಾಗಿ ಚಪ್ಪಾಳೆ ತಟ್ಟಿ ತಾಳ ಹಾಕುತ್ತಾ ಹೇಳುವರು)

(ಇದನ್ನು ನೋಡಿ ಎರಡನೇ ಪ್ರೇಕ್ಷನಿಗೆ ರೇಗಿ) ಅಡಾಪಾವಿ! ನಾ 'ಬಂಗೇರುಹಾ'ನ್ನ ಇವಾ 'ಜಯಜಯ ಗೋಕುಲಬಾಲ' ಸೊಲ್ರಾ. ಡೇ ಮೂತ್ರಪ್ಪಾವೀ! ಅಂದ 'ಬಂಗೇರುಹಾ' ಪಾಪ್ತ್ರೆಯಾ ಇಲ್ಲೆಯಾ? (ತನ್ನ ಸುತ್ತಲಿದ್ದ ಮಿತ್ರರನ್ನು ನೋಡಿ) ಎಡ್ರಾಡೇ! ಅವ ಯೆನ್ನಾ ಪೆರುವಳಿ? ನಾಂಬೊ ಕಾಟಲಾ ಅವನಕ್ಕು! ಇವಾ ಎಲ್ಲಾ ಕನ್ನಡಂ ಪೇಚರ ಪೈಲೆ ಪಚ್ಚೆ ಪಕಂಗೋ! ನಾವೆಲ್ಲಾ 'ತಮಿಳ್ ತಮಿಳ್' ಪೇಶರವಾ—ಪಾಡರವಾ. ಸೊಲ್ರಾಡೇ!

ಬಂಗೇರುಹಾ ಪಾಡು ಮೂರ್ತ್ರಪ್ಪಾ।
ಅಂದ ಬಂಗೇರುಹಾ ಪಾಡು ಮೂರ್ತ್ರಪ್ಪಾ॥

(ಅವರೂ ಚಪ್ಪಾಳೆಯೊಡನೆ ತಾಳ ಬಡಿಯುತ್ತಾ ಕೂಗುವರು)

[ಸೂತ್ರಧಾರ— ಹರೀ ಲೋ! ಏನೋ ಇದು ವಿಪರೀತಕ್ಕಿಟ್ಟು ಕೊಂಡಿದೇ? ಏನು ಮಾಡೋದು ಈಗ? ಮುಂದಿದೋರೆಲ್ಲಾ ಎದ್ದು ಹೋದ್ರೆ ಇದು ನೋಡಿ?

ಪರಿಪುಷ್ಟ—ಮಾಡೋದೇನಾ? ಅವ್ರೆಲ್ಲಾ ದುಡ್ಡು ಬಿಸಾಕಲ್ವ ಬಂದಿರೋದು ನಾಟ್ಕಾ ನೋಡಾಕೆ? ಅವ್ರಿಗೆ ಬೇಕಾದ್ದನ್ನ ನಾವೂ ಕೊಡ್ಬೇಕು. ನೀನು ಮುಂದಿರೋರನ್ನ ನೋಡ್ತಾ ಕುಂತುಕೊಂಡ್ರೆ ಆಗ್ತೈತಾ? ಮುಂದಿರೋರೆಲ್ಲಾ ಪುಕ್ಕಾಟು ಮುಫತ್ತು, ಕಾಲು ಕಾಂಪ್ಲಿಮೆಂಟ್ರು. ಅದೋ! ವ್ಯಾದೊರಸದ್ ಕಾಂಪ್ಲೀಮೆಂಟ್ರೀ ಎತ್ಕೊಂಬಂದ್ ಗೇಟ್‌ಪಾಸ್ನಾರ್ ಗುಪ್ಪಾಮ್ಸಿ ಟಿಕೇಟ್ ಕೇಳೋರ್ನ ಘೋಕಾಕಲಾಯ್ಸಿ ಒಳಗ್ ಬಂದು ಕುಕ್ಕರ್ಸಿರೋ ಬದ್ಮಾಷುಗಳೇ! ನಾಪಾಣೆ ಗ್ಯಾಲ್ರೀಯೋರೊಂದ್ರೆ ದುಡ್ಡು

ಬಿಸಾಕಪ್ರೆ ಅಪ್ಪೂ! ಯೋಳೆ ಯೋಳು ಅವರು ಕೇಳಿದ್ನ. ಇಲ್ದಿದ್ರೆ ಇನ್ನು ಎಸೀತವ್ರೆ ಕಲ್ಲೋ ಚಪ್ಲೀನೋ!

ಸೂತ್ರಧಾರ—ಸ್ಸರೀ! ಷುರುಮಾಡು!]

(ರಾಗ: ಖರ-ಭೈರವೀಪ್ರಿಯ-ತಾಳ: ಆದಿ.)

ಜಯ ಜಯ ಗೋಕುಲ ಬಾಲ
ಜಯ ಸಕಲಾಗಮ ಲೀಲಾ ||

(ತಮಿಳಿನವರ ಕಡೆ ನೋಡಿ)

ಪಂಕೇರುಹಾಸ—ನಾಸೀನುಡೈನ
ಬ್ರಹ್ಮಕೈನ ತೆಲುಸುನೋ ತೆಲಿಯದೋ
ಸಂಕಲ್ಪ—ಮೆಟ್ಟೀದೋ—ಮನಸಾ
ಸಾಕೇತ ರಾಮುಣೀ

(ಬದಲಾಯಿಸಿ ಕನ್ನಡದವರ ಕಡೆ ನೋಡಿ)

ಜಯ ಜಯ ಗೋಕುಲ ಬಾಲ... .....(ಮುಗಿಸುವನು)

[ಎರಡೂ ಪ್ರೇಕ್ಷಕರ ಗುಂಪಿನವರು ಅವರವರಿಗೆ ಬೇಕಾದ್ದು ಹಾಡಿದಾಗ ಚಪ್ಪಾಳೆ ತಟ್ಟುವರು—'ಭೇಷ್ ಭೇಷ್-ಬಲೆ ಬಲೆ' ಎನ್ನುವರು]

(ಸೂತ್ರಧಾರ 2 ಹಾಡನ್ನೂ ಮುಗಿಸಿ ಕೊನೆಯಲ್ಲಿ ಕಮಾಚಿಗೆ ಬದಲಾಯಿಸಿಕೊಂಡು 'ಸುಜನ ಜೀವನ' ವನ್ನೂ ಹೇಳಿ ಮುಗಿಸುವನು. ಮುಂದಿರುವವರು ಚಪ್ಪಾಳೆ ತಟ್ಟುವರು)

ಸೂತ್ರಧಾರ—(ಸ್ವಗತ) ಅಬ್ಬಾ! ಬದುಕಿದೆ (ಪ್ರಕಾಶ) ಸಭಾಸದರಲ್ಲಿ ಅನಂತ ವಂದನೆಗಳು. ಇಂದು ತಮ್ಮೆಲ್ಲರ ಅವಗಾಹನೆಗಾಗಿ 'ವಿವಿಧ ವಿನೋದ್ದಾವಳಿ' ಪ್ರದರ್ಶನವಾಗಲಿದೆ ಎಂದಿನಂತೆ ಪ್ರೋತ್ಸಾಹಿಸಬೇಕು. ಮೊದಲು 'ಶಂಬರನ ಶೃಂಗಾರ'ದ ಮೊದಲು ಭಾಗವಾದ 'ಪ್ರವೇಶ'—ಇದರ ಕತೆ ಹೀಗಿದೆ. ನನ್ನ ಜೀವನದ ಕಷ್ಟಸುಖಗಳಲ್ಲಿ.....(ಸ್ವಗತ) ಕಷ್ಟವೇ ಇದುವರೆಗೂ, ಒಂದು ದಿನ ಸುಖವಿಲ್ಲ ..(ಪ್ರಕಾಶ) ನನ್ನೊಡನೆ ಕೈ ಹಿಡಿದು ಪತಿಯ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ನೆರಳಿನಂತೆ ಹಿಂಬಾಲಿಸಿ ಬೆನ್ನಲ್ಲಿ ಬಿದ್ದಿರುವ ನನ್ನ ಒಡನಾಡಿ 'ನಟಿ'ಯು ನಿಮಗೆ ಆ ಕತೆಯನ್ನು ಹೇಳುವಳು. 'ಆರ್ಯೆ! ನಿನ್ನ ಅಲಂಕಾರವು ಪೂರ್ತಿಯಾಗಿದ್ದರೆ. (ನೇಪಥ್ಯದ ಕಡೆ ನೋಡಿ) .....ಓಹೋ!

ಆರ್ಯೆಯು ತೊಡಕಿಗೆ ಸಿಕ್ಕಿರುವಂತಿದೆ ಬಿಡಿಸಿಕೊಂಡು ಈ ಕ್ಷಣ ಬರುವೆನು. (ಗ್ರೀನ್ ರೂಮ್ ಕಡೆ ಹೆಜ್ಜೆ ಇಡುವನು)

[‘ಅ’ ರಂಗದ ಘರದೆ ಏಳುವುದು-(ರತೀ ಪಾರ್ಟಿನ ಸುಬ್ಬು, ನಟೀ ಪಾರ್ಟಿನ ರಂಗುವಿನ ಸೀರೆ ಹಿಡಿದು ಎಳೆಯುತ್ತ) ಲೋ ನನ್ನ ಸೀರೇನೂ ಸುತ್ತಿಕೊಂಡು ನಾನು ಚಡ್ಡೀಲಿ ನಿಂತ್ಕೊಳ್ಳೋ ಹಾಗೆ ಮಾಡಿದೀಯಲ್ಲೋ? ನೀನು ನಟಿ, ಕತೆ ಹೇಳ್ತೀಂತಿದಾನೆ ಆ ಮೂರ್ತಿ. ನೀನಾಡೋದು ಎರಡೇ ಮಾತು, “ರತಿಯು ವಿಲಾಪ ಮುಗಿಸಿ ಈ ಮಾರ್ಗವಾಗಿಯೇ ಬರುತ್ತಿರುವಳೂ”ಂತ ಅಂದು ಪುಸಕ್ಕಂತ ಒಳಗೆ ಬರ್ತೀಯಾ! ನಾನು ಎಂಟರ್ ಆಗೋಕೆ ತಯಾರಾಗಿರ್ಬೇಡವೇ. ನೀನು ಕಟ್ಟಿಕೊಂಡಿರೋ ಜರತಾರಿ ನಕ್ಷಿ ಲಂಗ ದಾವಣೀ ಎರಡೂ ಇಲ್ಲಿ ಬಿಚ್ಚಿಕೊಟ್ಟು ಆಮೇಲೆ ಹೋಗು ಸೀನಿಗೆ! ಒಳ್ಳೇ ಗಿರಾಕಿ! ನಾನು ಮೇಲೆಲ್ಲಾ ರತೀ ಹಾಗೆ ಮೇಕಪ್ ಮಾಡಿಕೊಂಡು ಚಡ್ಡೀಲಿ ಬರ್ಲಾ ಸ್ಟೇಜಿಗೇ? ಬಿಡೋ ಸೀರೇನಾ! (ಜಗ್ಗುವನು)

ಮೂರ್ತಿ—(ಬೇಗ ಓಡಿಬಂದು) ಲೋ ಸುಬ್ಬು! ಅವನು ಸೀನಿಗೆ ಬರ್ಬೇಕಮ್ಮಾ ಬಿಡೋ ಲೇ! ಒಂದು ನಿಮಿಷ, ಬಂದು ಬಿಡ್ತಾನೋ!

ಸುಬ್ಬು—ಅಲ್ಲಾ! ಒಳ್ಳೇ ಬೇಕೂಫನೋ ನೀನು! ‘ರತೀ ಬರ್ತಾ ಇದಾಳೇಂ’ತಂದರೆ ನಾನು ಸೈಡ್‌ವಿಂಗ್ಸಲ್ಲಿ ಸಿದ್ಧವಾಗಿರಬೇಡವೇ? ಬ್ರೆಸ್ಟ್ ಬಾಲ್ಸಿಲ್ಲಾ, ಬ್ರೆಸ್ಟು ಮುಚ್ಚಿಕೊಳ್ಳೋಕೇ ಅಂತ ನಾನುಟ್ಕೊಕೋತಿದ್ದ ಸೀರೇನೂ ಸೆಳಕೊಂಡ. ನನಗೆ ಅವನ್ನಾಕ್ಕೊಂಡಿದ್ದ ಲಂಗಾದ್ವಾವಣೀನೂ ಇಲ್ಲ. ಅದರ ಮೇಲೆ ಸೀರೆ ಸುತ್ಕೊಂಡಿದಾನೆ —ನಾನು ಹೀಗೇ ಬರಲೇ ನೀ ಕರೆದಾಗ? ನಂಗೇನು? ನಿನ್ನ ಕಂಪೆನಿ ಹೆಸರೇ ಕೆಟ್ಹೋಗುತ್ತೆ!

ಮೂರ್ತಿ—ಲೋ ರಂಗೂ! ಬಿಡಮ್ಮಾ ಅವನ ಸೀರೇನ. ಇದೇನೋ ಇದು, ಯಾವತ್ತೂ ಇಲ್ಲದ ಜಗ್ಳ—ಒಳ್ಳೇ ಕಲೆಕ್ಷನ್ನಾಗಿ ಫುಲ್ ಹೌಸಾಗಿರೋವಾಗ? ಬಿಡೋ ಸೀರೇನಾ ವಮ್ಮಯ್ಯಾ! (ಸೀರೆ ಸೆಳೆದು ಬಿಚ್ಚಿ ರತೀ ಪಾರ್ಟಿಗೆ ಎಸೆದು ‘ನಟೀ’ನ್ನೋಂದಿ) ನಡಿಯೋ ಸ್ಟೇಜಿಗೆ ತಡೀ! ನಾನು ಹೋಗಿ ಪುನಃ ಕರೀತೇನೇ—ತಡಿಯೋ! ಹೀಗೇ ಒಂದು ಬಿಡಬೇಡ—ಆ ಓವರ್ ಕೋಟೋ ಇಲ್ಲಾ ಆ ಅಪ್‌ಟುಡೇಟಮ್ಮಯ್ಯನ ಸ್ವೆಟರೋ ಯಾವುದಾದರೂ

ತೊಟ್ಕೊಂಡು ಬಾ ! ನಮ್ಮ ಹುಳುಕುಗಳೇನೇ ಇರಲ್ಲಿ, ಒಳ್ಳೆ ಷೋ ಕೊಡೋಣ ಬಾಮ್ಮಾ ! (ಸುಬ್ಬೂಗೆ) ಇನ್ನು ನೀ ಸಿದ್ಧವಾಗೋ ! ಅಳಬೇಡ ಸೀರೆ ಇಲ್ಲಾಂತ–ರತೀ ಸ್ಟೇಜಿನ ಮೇಲೆ ಅಳೋದು ಸರಿ–ಸೈಡ್‌ವಿಂಗ್ಸಲ್ಲೂ ಅಳಬೇಕೇ–ರೆಡಿ ಆಗು ಬೇಗ ! (ರಂಗುವಿಗೆ) ಊ್ಞ ಬಾರೋ ಕರೆದ ಕೂಡಲೇ. 'ಆ' ರಂಗಕ್ಕೆ ತೆರಳುವನು.]

—'ಆ' ರಂಗದ ಪರದೆ ಏಳುವುದು.—

ಸೂತ್ರಧಾರ—(ಪ್ರಕಾಶ) ಅಹಾ ! ಆರ್ಯೆಯು ತಡವಾದುದಕ್ಕೆ ನಾನೆಣಿಸಿದ್ದಂತೆ ಗುರುತರವಾದ ಕಾರಣವೇ ಇತ್ತು. ಮುಕ್ಕಣ್ಣನ ಮೂರನೆಯ ಕಣ್ಣಿನ ಅನಿಲದಿಂದ ದಗ್ಧನಾದ ಮನ್ಮಥನ ಪ್ರಿಯಪತ್ನಿ ರತಿಯ ವಿಲಾಪವನ್ನು ಆಲಿಸುತ್ತ ಆರ್ಯೆಯು ಮೈಮರತೇ ಇದ್ದಳು. ಎಚ್ಚರಿಸಿ ಬಂದಿರುವೆ–ಅಹಾ ! ಇದೋ ಬಂದಳಾರ್ಯೆ ! ಆರ್ಯೆ ! ರತಿ ವಿಲಾಪವನ್ನಾಲಿಸುತ್ತ ಆಲಿಸುತ್ತ ಇಲ್ಲಿ ಸಭಿಕರು ನಿನ್ನ ಕೋಕಿಲಧ್ವನಿಯನ್ನೂ ಮಂಜುಳಗಾನವನ್ನೂ ಕೇಳಲು ಹಾತೊರೆಯುತ್ತಿರುವರೆಂಬುದನ್ನು ಮರೆತೆಯಾ ? ಅದಂತಿರಲಿ ! ಇಂದಿನ ನಾಟಕವಾದ 'ಶಂಬರನ ಶೃಂಗಾರ'ದ ಕತೆಯನ್ನು ಸಭಾಸದರಿಗೆ ವಿಶದೀಕರಿಸು–ಸೂಕ್ಷ್ಮವಾಗಿ. ಈಗಾಗಲೇ ವೇಳೆಯಾಯಿತು. ಸಂಪ್ರದಾಯವನ್ನಿಂದು ಕೊಂಚ ಮರೆಯೋಣ ಋತುವರ್ಣನೆಯ ಗಾನವಿಂದು ವರ್ಜ. ಪೌರಾಣಿಕ ನಾಟಕಗಳ ಮೇಲೋಗರವೊಂದನ್ನು ಪ್ರದರ್ಶಿಸಿ ಪ್ರೇಕ್ಷಕರಿಗೆ ರಸದೌತಣ ನೀಡುವ ! ಆರ್ಯೆ ! ಇಷ್ಟೇಕೆ ತಡಮಾಡಿದೆ ?

ನಟಿ—ಆರ್ಯಪುತ್ರಾ ! ಕಾಮದೇವನು ದಗ್ಧನಾಗಿ ಬೂದಿಯಾಗಲು, ಅಲ್ಲಿಯೇ ಮೂರ್ಛಿತಳಾಗಿದ್ದ ರತಿದೇವಿಯನ್ನು ಸಂತೈಸಿ ಆ ಉರಿಯುಊ ಸೋಕಿ ವಸ್ತ್ರವಿಹೀನಳಾಗಿದ್ದ ಆ ಪತಿವ್ರತಾ ಶಿರೋಮಣಿಗೆ ನನ್ನ ಸೀರೆಯನ್ನೇ ಉಡಿಸಿ ಸಂತೈಸಿದೆ–ಶಂಬರಾಸುರ ಮಹಾರಾಜನ ಪುರವು ಇದೇ ಮಾರ್ಗದಲ್ಲಿರುವ ಅರಣ್ಯವನ್ನುದಾಟಿದರೆ ದೊರಕುವದೆಂದೂ ಅಲ್ಲಿಗೆ ತೆರಳಬೇಕೆಂದೂ ಸೂಚಿಸಿದೆ. ಅದೋ ಆಕೆ ನಾ ಕೊಟ್ಟ ವಸನ ಧರಿಸಿಕೊಳುತ್ತಿದ್ದಾಳೆ. ಆರ್ಯಪುತ್ರನ ದೃಷ್ಟಿಯನ್ನೊಮ್ಮೆ ಅತ್ತ ಪಸರಿಸೋಣಾಗಲಿ. ಏನು ರೂಪು ಆಕೆಯದು ?

ಸೂತ್ರಧಾರ—ಆರ್ಯೆ ! ಪತಿವ್ರತಾ ಶಿರೋಮಣಿಯಾದ ಆ ರತಿದೇವಿಯನ್ನು, ಮನ್ಮಥನ ಮಹಿಷಿಯನ್ನು, ಈ ಮಾನವ ಮಾತ್ರನಾದ ಪರಪುರುಷನು

ಕಣ್ಣೆತ್ತಿ ನೋಡುವುದೆಂದರೇನು ? ಅದರಲ್ಲೂ ಆಕೆ ನಿರ್ವಸನಳಾಗಿದ್ದು ವಸ್ತ್ರ ಧರಿಸುತ್ತಿರುವಾಗ ! ಶಾಂತಂ ಪಾಪಂ ಶಾಂತಂ ಪಾಪಂ !

ನಟಿ—ಆರ್ಯಪುತ್ರ ! ನಿನ್ನ ಏಕಪತ್ನೀ ವ್ರತತ್ವಕ್ಕೆ ಮೆಚ್ಚಿದೆನು. ಅದರಿಂದಲೇ ಯಾವಜ್ಜೀವವೂ ನಿನ್ನ ನೆರಳಾನುವರ್ತಿಯಾಗಿ ನಾನಿರುವುದು. ಅದಂತಿರಲಿ ! ಅದೋ ರತಿಯು ಇತ್ತಲೇ ಬರುತ್ತಿರುವಳು. ನಾವು ಹೋಗಿ ಶಂಬರಾಸುರನ ಆಸ್ಥಾನದ ದೃಶ್ಯದ ಏರ್ಪಾಡನ್ನು ಮಾಡುವಾ.

ಸೂತ್ರಧಾರ ಹಾಗೆಯೇ ಆಗಲಿ ಆರ್ಯೆ ! ನೀಂ ಮುಂ ಪೊರಮಡು ! ನಾನೂ ನಿನ್ನ ಹಿಂದೆಯೇ ಪಿಂಪೊರಮಡುವೆನು. (ನಟಿಯು ಬಲಗಡೆ ಸೈಡ್ ವಿಂಗ್ಸಿಗೆ ತೆರಳಲು, ರತಿಯು ಬರುತ್ತಿರುವ ಕಡೆ ನೋಡಿ) ಅಹಾ ! ರತಿದೇವಿಯೆಂದರೆ ರತಿ ದೇವಿಯೇ ! ಅದರೂ ಪತಿವಿಹೀನೆಯಾದ ರತಿದೇವಿಯಾದರೂ ಎಂತಹ ರೂಪು ? ಆರ್ಯೆ ಮರೆಯಾದಳು ! ಈಗ ಚೆನ್ನಾಗಿ ಈಕ್ಷಿಸಬಹುದು. ಸದ್ಯ ! (ತೆರಳುವನು)

—ಇಂತಿಲ್ಲಿಗೆ ನಾಂದೀ ದೃಶ್ಯ ಸಂಪೂರ್ಣಂ—

# ಅಂಕ ೧ ಪ್ರವೇಶ

[ಸೂತ್ರಧಾರನು ತೆರಳಿದೊಡನೆ ದೊಡ್ಡ ಅಂಕದ ಪರದೆ ಬಿದ್ದು ಒಂದು ಕ್ಷಣ ನಿಂತು ಪುನಃ ಏಳುವುದು - ಅರಣ್ಯದ ಸೀನು. ಒಂದು ದೊಡ್ಡ ವೃಕ್ಷ, ಮಧ್ಯೆ - ಸಿಂಪ, ಹುಲಿ, ಕರಡಿಗಳು, ಬೇರೆಬೇರೆ ಪೊದೆಗಳಿಂದ ಹುಲ್ಲೆ, ಹಸು, ಜಿಂಕೆ ಮರಿಗಳನ್ನು ಹೆದರಿಸಿ ಓಡಿಸುತ್ತಿರುವಂತೆ ಪರದೆಯ ಮೇಲಿನ ಚಿತ್ರಗಳು - ಸ್ಟೇಜು ಅರ್ಧಕತ್ತಲೆ]

(ರತಿಯು ಗ್ರೀನ್ ರೂಮಿನಿಂದ ಹಾಡುತ್ತಲೇ ಪ್ರವೇಶಿಸುವಳು - ಹಾರ್ಮೋನಿಯಂಗೆ ತಲೆಮೇಲೆ, ಹುಬ್ಬಿನ ಮೇಲೆ, ಬೆರಳು ಸವರಿಕೊಳ್ಳುತ್ತಾ ಶೃತಿ ತೋರಿಸುವಳು)

ರಾಗ : ಯದುಕುಲ ಕಾಂಭೋಜಿ—ತಾಳ ತ್ರಿಪುಟ—ಚತುರಶ್ರ

ಕಾಣಲೆಂತು ನಾನೂ ಪ್ರಾಣಕಾಂತನನ್ನೂ ।
ಘೋರಕಾನನಾದಿ ಕಾಮದೇವನನನ್ನೂ ॥
ಕಾಣಲೆಂತು ಊ ಊ !

ಆಹಾ ! ಈ ಘೋರ ಕಾನನದಲ್ಲಿ ಏಕಾಂಗಿಯಾಗಿ ಅಬಲೆಯಾದ ನಾನು ಪತಿಯನ್ನು ಇನ್ನು ಕಾಣುವುದೆಲ್ಲಿ ? ಸಮೀಪದಲ್ಲಿ ಶಂಬರಾಸುರನ ಪುರವಿರುದೆಂದೂ ಅಲ್ಲಿ ನನ್ನ ಪತಿಯು ಅವನ ಪುತ್ರನಾಗಿ ಬೆಳೆಯುತ್ತಿರುವನೆಂದೂ ಉಮಾದೇವಿಯು ಸಂತೈಸಿ ಕಳುಹಿಸಿದಳು. ಅಲ್ಲಿಗೆ ಸೇರುವುದೆಂತು ? ಕೈ ಕಾಲುಗಳೇ ನೋತುಹೋಗುತ್ತಿರುವುದಲ್ಲಾ ! ಲೋಕಮೋಹಕನಾದ ನನ್ನ ಪತಿ ಮನ್ಮಥನ ಮಹಿಷಿಯಾದ ನನ್ನ ಪಾಡೇ ಹೀಗಾದ ಮೇಲೆ ಮಾನವ ಲೋಕದ ಮಹಿಳಾಮಣಿಯರ ಪಾಡೇನು ? ಇರಲಿ ! ' ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ' ಎಂಬುದು ವೇದವಾಕ್ಯವೇ ಅಲ್ಲವೇ ? ನನ್ನ ಪೂರ್ವ ಜನ್ಮದಲ್ಲಿ ಯಾವ ದಂಪತಿಗಳನ್ನು ಅಗಲಿಸಿ ನೋಯಿಸಿದ್ದೆನೋ ಈ ಜನ್ಮದಲ್ಲಿ ಹೀಗೆ ಅವಸ್ಥೆ ಪಡಬೇಕಾಗಿದೆ. ಇರಲಿ ! ದೇವಿಯರ ವರವೊಂದೇ ನನಗೆ ಧೈರ್ಯಸ್ಥೈರ್ಯಗಳನ್ನು ಕೊಡುತ್ತಿದೆ. ಓಹೋ ! ಇಲ್ಲಿ ಯಾರೋ ಬರುವಂತಿದೆ. ಹಿಂದೆ ಹೆಜ್ಜೆ ಹೆಜ್ಜೆಗೂ ಇವನು ತಿರುಗಿ ನೋಡಿದಾಗೆಲ್ಲ ಹಿಂದಿರುವ ಜನ ತಲೆತಗ್ಗಿಸಿ ಮಾತನಾಡುವಂತಿದೆ. ಇವನಾರು ?

ಇವನೇ ಶಂಬರಾಸುರ ಮಹಾರಾಜನೋ ? ದೇವಿಯೇ ! ಪ್ರಸನ್ನಳಾದೆಯಾ ! ಆಹಾ ! ಇವನೇ ಶಂಬರಾಸುರನಾಗಿದ್ದಲ್ಲಿ ದೇವಿಗೆ ಅನಂತ ನಮಸ್ಕಾರಗಳು. ಇಲ್ಲಿಯೇ ಈ ವೃಕ್ಷದ ಮರೆಹೊಗುವೆ ! ಅವರಾಡುವ ಮಾತುಗಳನ್ನು ಕೇಳಿ ಅನಂತರ ಮುಂದಿನ ಹೆಜ್ಜೆ ಇಡುವೆ. (ಪರದೆಯ ವೃಕ್ಷದ ಬಳಿ ಸರಿದು ನಿಲ್ಲುವಳು)

(ನೇಪಥ್ಯದಲ್ಲಿ)

[ಕೊಂಬು ಕಹಳೆಗಳ ಶಬ್ದ - "ಚಂಡಮಾರ್ತಾಂಡ ಚಂಡ ಪ್ರಚಂಡ ರಾಕ್ಷಸ ಕುಲ ಪ್ರದೀಪ ತ್ರಿಜಗ ಲೋಕೇಶ್ವರ ಮಹೇಶ್ವರನ ಪರಮಭಕ್ತ ಶಂಬರಾಸುರ ಮಹಾರಾಜ ಭೋಪರಾಕ್" ಮಹಾರಾಜನ ಅರಣ್ಯವಿದು. ಇಲ್ಲಿ ಕ್ರೂರ ಮೃಗಗಳಿದ್ದರೆ ಇಲ್ಲಿನ ಪ್ರಕೃತಿ ನಿಯಮಗಳಿಗೆ ವಿರೋಧ. ರಾಜನ ಶಾಸನವನ್ನು ಮುರಿದಂತೆ. ಅಂತಹ ಮೃಗಗಳು ತಾವಾಗಿ ಮುಂದೆ ಬಂದು ಮಹಾರಾಜನ ಸ್ವಹಸ್ತದಿಂದ ಶಿಕ್ಷೆ ಸ್ವೀಕರಿಸಬೇಕು. ಇದೋ ಮಹಾರಾಜರು ಬರುತ್ತಿರುವರು. ಶಂಬರಾಸುರ ಮಹಾರಾಜರು ! ಭೋಪರಾಕ್ ! " ಎನ್ನುವುದು ಕೇಳುವುದು ]

[ರಂಗಭೂಮಿಯ ದೀಪ ಕ್ಷಣಮಾತ್ರ ಆರಿ ಹತ್ತುವಲ್ಲಿ ಹಿಂದಿನ ಪರದೆ ಬದಲಾಗಿ ಬೇರೆ ಪರದೆ ಇಳಿದಿರುವುದು ಅದರಲ್ಲಿ ಹುಲ್ಲೆ ಮುಂತಾದವುಗಳು ಭಯವಿಲ್ಲದೆ ನಿಂತಿರುವಂತೆಯೂ, ಹುಲಿ, ಸಿಂಹ, ಕರಡಿಗಳು ತಮ್ಮ ಗುಹೆಗಳ ಕಡೆ ಬಾಲ ಮುದುರಿಕೊಂಡು ಓಡುತ್ತಿರುವಂತೆಯೂ ಕಾಣುವುದು. ರತಿದೇವಿ - ಮೊದಲ ಸ್ಥಳದಿಂದ ಸರಿದು ರಂಗದ ಕತ್ತಲಾಗಿರುವ ಪಕ್ಕಕ್ಕೆ ತೆರಳಿ ನಿಲ್ಲುವಳು.

ಮಹಾರಾಜನ ಮುಂದೆ ಕತ್ತಿ, ಗುರಾಣಿ, ಕಠಾರಿ, ಚಾಕು, ಬ್ಲೇಡುಗಳು, ಸರಪಳಿ, ರೈಫಲ್ಲು, ಗನ್ನು, ಪಿಸ್ತೂಲು, ಚೂರಿ, ಭಲ್ಲೆ, ಲಟ್ಟ, ಲಾರಿ, ಬಿಲ್ಲು, ಬಾಣ, ಬತ್ತಳಿಕೆ ಎಲ್ಲವನ್ನೂ ಬೆಲ್ಟು ಡವಾಳಿಗಳಲ್ಲಿ ಧರಿಸಿ ಮೈಮೇಲೆ ಹೇರಿಕೊಂಡಿರುವ ಬೃಹದಾಕಾರದ ಮನುಷ್ಯನೊಬ್ಬ ಬೇಟೆಗಾರನ ಪೋಷಾಕು ಧರಿಸಿ ಬರುವನು. ಪರದೆಯ ಕಡೆ ನೋಡಲು, ಪರದೆಯ ಮೇಲೆ 'ಸ್ಪಾಟ್‌ಲೈಟ್' ಬಿಟ್ಟಂತೆ ಇವನನ್ನು ನೋಡಿಯೇ ಆ ಕ್ರೂರ ಮೃಗಗಳು ಓಡುತ್ತಿರುವಂತೆ ಪರದೆ ಆಡುವುದು. ಅವನೊಂದು ಪಕ್ಕಕ್ಕೆ ಬಂದು ನಿಲ್ಲುವನು.

ಮಹಾರಾಜನ ಪ್ರವೇಶ-ಹಿಂದೆ ಪರಿವಾರದವರೂ ಬಂದು ನಿಲ್ಲುವರು. ರಂಗದ 'ಆ' ಭಾಗ ಮಾತ್ರ ಬೆಳಕಾಗುವುದು. ಹಿಂದೆ ಕೂಗಿದವನೊಬ್ಬ ಮುಂದೆ ಬಂದು "ಶಂಬರಾಸುರ ಮಹಾರಾಜನಿಗೆ ವಿಜಯವಾಗಲಿ. ಈ ಗೊಂಡಾರಣ್ಯದ ಈ ಪ್ರಾಂತದಿಂದ ಇಲ್ಲಿ ಕ್ರೂರ ಮೃಗದ ಹಾವಳಿ ತುಂಬ ಆಗುತ್ತಿದೆಯೆಂದು ದೂರು ಬಂದಿದೆ. ಆ ದೂರು ಕೊಟ್ಟವರಾರು? ಮುಂದೆ ಬನ್ನಿ" ಎಂದು ಕೂಗಿ ಹಿಂದೆ ಹೋಗಿ ನಿಲ್ಲುವನು.]

ನೇಗಿಲಯೋಗಿ—(ಪ್ರವೇಶಿಸಿ) ಅಡ್ಡಬೀಳುವೆ ಮಹಾರಾಜ! ತಮ್ಮ ನಾಮಾಪಠನ ಮಾತ್ರದಿಂದ ಓಡಿಹೋಗುತ್ತಿದ್ದ ಈ ಪ್ರಾಂತದಲ್ಲಿ ಈಗೊಂದು ಪಕ್ಷದಿಂದ ಮುದಿಸಿಂಹವೊಂದು ನನ್ನಲ್ಲಿಗೆ ಬಂದು ಗುರುಗಟ್ಟುತ್ತಿದೆ. ಸಾರ್ವಭೌಮರ ಆಗಮನಕ್ಕಿಂತ ಮೊದಲೇ ಕೇಳಿಬಂದ 'ಪರಾಕ್' ಧ್ವನಿಗೇ ಭಯಪಟ್ಟು ಅರಣ್ಯದ ಕ್ರೂರಮೃಗಗಳು ಇತರ ವನ್ಯಮೃಗಗಳನ್ನು ಹೆದರಿಸುವುದನ್ನು ಬಿಟ್ಟು ತಮ್ಮ ತಮ್ಮ ಗುಹೆಗೆ ಓಡುತ್ತಿವೆ, ನೋಡಿ ಸಾರ್ವಭೌಮ! ಆದರೆ ಈ ಮುದಿಸಿಂಹ ಮಾತ್ರ ಓಡದೆ ನನ್ನ ಹಿಂದೆ ಬಿದ್ದಿದೆ- ಈಗ್ಗೆ ಮೂರು ದಿನವಾಯಿತು ಅದು ನನ್ನ ಬೆನ್ನ ಬಿದ್ದು– ಬೆಳಿಗ್ಗೆ ಏಕೆಂದು ಅದನ್ನು ಅದರ ಭಾಷೆಯಲ್ಲೇ ಕೇಳಿದೆ. ಅದಕ್ಕೆ ಉತ್ತರ ಹೀಗೆ ಬಂತು, ಕೇಳಿ.

(ಸಿಂಹ ಪಾತ್ರಧಾರಿ ಧ್ವನಿ ಅನುಕರಿಸಿ ಮಾತನಾಡುವನು)

ಸಿಂಹ—ಶಂಬರಾಸುರ ಮಹಾರಾಜನ ಕಟ್ಟಾಜ್ಞೆ ಈ ಅರಣ್ಯದಲ್ಲಿ ಬಂದಂದಿನಿಂದ ಇಲ್ಲಿನ ಕ್ರೂರಮೃಗಗಳೆನಿಸಿಕೊಂಡವಕ್ಕೆ ಆಹಾರವಿಲ್ಲವಾಗಿದೆ. ಪ್ರಕೃತಿಯ ಸೃಷ್ಟಿನಿಯಮಕ್ಕೇ ಇದು ವಿರೋಧವಲ್ಲವೆ? ಮಹಾರಾಜರು ಪ್ರಕೃತಿಗೇ ಒಡೆಯರೆನಿಸಿಕೊಂಡಿರುವವರು. ಅಂದಮಾತ್ರಕ್ಕೇ ಪ್ರಕೃತಿ ನಿಯಮಗಳನ್ನೇ ಬದಲಾಯಿಸಬೇಕೇ? ಕ್ರೂರಮೃಗಗಳೆಂದು ನಮ್ಮನ್ನೂ, ಸಾಧುಪ್ರಾಣಿಗಳೆಂದು ಇತರ ವನವಾಸಿಗಳನ್ನೂ ಹೆಸರಿಸಿರುವುದು ಕೇವಲ ಮಾನವಲೋಕದವರು ಮಾತ್ರ. ಇದು ಮಾನವನ ಕೀಳುಮಟ್ಟದ ಬುದ್ಧಿಶಕ್ತಿಗೆ ಅನುಗುಣವಾಗಿದೆ. ಆದರೆ ಇದು ರಾಕ್ಷಸರ ಲೋಕ. ರಾಕ್ಷಸರು ಅತಿಮಾನವರಷ್ಟೆ. ಅದರಲ್ಲೂ ಮಹಾರಾಜ ಶಂಬರಾಸುರನ ರಾಜ್ಯದಲ್ಲಿ ದುಷ್ಟಶಿಕ್ಷಣ ಶಿಷ್ಟಪರಿಪಾಲನೆ ಎಂದಿಗಿಂತ ಹೆಚ್ಚಾಗಿ ನಡೆಯತಕ್ಕದ್ದು ಸರಿ. ಅಂದಮಾತ್ರಕ್ಕೆ ಸಿಂಹಗಳಾದ ನಾವು. ಹುಲಿ ಶಾರ್ದೂಲ ಕರಡಿಗಳಾದ ಜೊತೆಯವರು ನನ

ಪ್ರಜೆಗಳು,

ಇದುವರಗೆ

ಮಹಾರಾಜ

ಅದರಂತೆ ಷ

ಪ್ರಾ

ತಜ್ಞನ್ನು.

ಶಕ್ತಿಯಿದೆಯೆಂದು ನಾವು ಬಲ್ಲೆವು. ನಾನೂ ಬಲ್ಲೆ. ಇತರ ಮೃಗಗಳಿಗೆ ತಿಳಿಯದು. ನಾವು ಗುಹೆ ಬಿಟ್ಟು ಹೊರಗೆ ಬಂದೊಡನೆ ಅವೆಲ್ಲ ಅರಚುತ್ತ ಭಯದಿಂದ ಈ ನೇಗಿಲಯೋಗಿಯ ಬಳಿಗೆ ಬರುತ್ತಿದ್ದುದನ್ನು ಮೃಗರಾಜ, ನಾನು, ನೋಡಿದೆ. ಅದಕ್ಕಿಂತ ಮುಂಚೆ ನಾನೇ ಇವನಲ್ಲಿಗೆ ಬಂದು ಬೆನ್ನು ಬಿದ್ದರೆ ತಮ್ಮವರೆಗೂ ದೂರು ಹೋದೀತು. ತಾವಿಲ್ಲಿಗೆ ಬಂದೀರಿ. ಆಗ ಪ್ರತ್ಯಕ್ಷವಾಗಿ ನಮಗೆ ದೈವದತ್ತವಾದ ಆಹಾರ ಕೊಡಿರೆಂದು ಕೇಳೋಣ. ಶಂಬರಾಸುರ ಮಹಾರಾಜರು ಮಹಾನ್ಯಾಯಪರರು. ನಮಗೆ ನ್ಯಾಯವಾಗಿ ದೊರೆಯಬೇಕಾದ ಆಹಾರ ದೊರಕೇ ದೊರಕುವುದು–ಎಂದು ಬಂದಿದ್ದೇನೆ.

ನೇಗಿಲಯೋಗಿ—ಈಗ ಸಿಂಹದ ಮೊರೆಯನ್ನು ಮಹಾರಾಜರೇ ಪರಾಂಬರಿಸಬೇಕು.

ಶಂಬರಾಸುರ– ಆಹಾ! ಪ್ರಕೃತಿಯ ನಿಯಮಗಳಿಗೆ ವಿರುದ್ಧಾಚರಣೆ ಸರ್ವಥಾ ಕೂಡದು. ಆ ಮೃಗರಾಜನೆಲ್ಲಿ? ಕಾಣುವುದಿಲ್ಲವಲ್ಲ? ನನ್ನ ಮುಂದೆ ಬರಮಾಡು.

ನೇಗಿಲಯೋಗಿ (ಅದಕ್ಕಾಗಿ ತಾನು ಸಿಂಹನ ಮುಖದ ಮೇಲೆ ಹೊದಿಸಿದ್ದ ಕಂಬಳಿ ತೆಗೆದು) ಮೃಗರಾಜ! ಮಹಾರಾಜರು ನಿನ್ನ ಬೇಡಿಕೆಯನ್ನು ಈಡೇರಿಸುವ ಮುನ್ನ ನಿನ್ನನ್ನು ಪರೀಕ್ಷಿಸಲಿಚ್ಛಿಸಿರುವರು. ಹೀಗೆ ಬಾ. ಮಹಾರಾಜರಿಗೆ ನಮಸ್ಕರಿಸು.

ಸಿಂಹ—(ಮುಂದೆ ಬಂದು ದೀಪದ ಬೆಳಕಿಗೆ ಬೆದರಿ ಬೆಚ್ಚಿದಂತೆ ಮಾಡಿ, ಪ್ರೇಕ್ಷಕರನ್ನು ಮೊದಲು ನೋಡಿ, ಮಹಾರಾಜನ ಪರಿವಾರದವರನ್ನೂ ನೇಗಿಲಯೋಗಿಯನ್ನೂ ಸುತ್ತ ಒಮ್ಮೆ ನೋಡಿ, ಕೊನೆಗೆ ಕತ್ತೆತ್ತಿ ಮಹಾರಾಜನನ್ನು ನೋಡಿ ಮೊಣಕಾಲೂರಿ ನಮಸ್ಕರಿಸುವುದು.)

ಶಂಬರಾಸುರ—(ಮುಂದೆ ಬಂದು ಮೃಗರಾಜನ ತಲೆ ಮೈದಡವಿ)

ನಿನ್ನ ಪ್ರಣಾಮವನ್ನು ಸ್ವೀಕರಿಸಿದ್ದೇವೆ. ಎದ್ದು ನಿಲ್ಲು ಮೃಗರಾಜ!

(ಸಿಂಹವು ನಿಲ್ಲುವುದು)

(ಠೀವಿಯಿಂದ ನಿಂತು) ಮೃಗರಾಜ! ನಿನ್ನ ವಾದವೇನೋ ನ್ಯಾಯಸಮ್ಮತವೇ; ಆದರೆ ನನ್ನ ಆಜ್ಞೆಯನ್ನು ನೀವೆಲ್ಲ ತಪ್ಪು ಅರ್ಥಮಾಡಿಕೊಂಡಿದ್ದೀರಿ. ಕಾಡಿನಲ್ಲಿ ಒಂದು ಮೃಗಕ್ಕೆ ಆಹಾರವಾಗಿ ಮತ್ತೊಂದು ಮೃಗ ಸೃಷ್ಟಿಯಾಗಿರುವುದು ಅಕ್ಷರಶಃ ನಿಜ. ನನಗೆ ಬಹು ದಿನದ ಹಿಂದೆ ಬಂದ ದೂರಿನಂತೆ ಸಿಂಹ,

ಹುಲಿ, ಶಾರ್ದೂಲ, ಕರಡಿ, ತೋಳಗಳಂತಹ ಮೃಗಗಳು ದೈವದತ್ತ ವಾದಂತೆಯೇ ತಾವು ಆಹಾರಕ್ಕಾಗಿ ಉಪಯೋಗಿಸಬೇಕಾದ ಕೆಲವು ಮೃಗ ಗಳನ್ನು ಮಾತ್ರ ಕೊಂದು ತಿನ್ನುವುದು ಬಿಟ್ಟು ಮನಬಂದಂತೆ ಸ್ವೇಚ್ಛಾಚಾರಿ ಗಳಾದುವೆಂದೂ ಅದರಿಂದ ಇತರ ಹುಲ್ಲೆ ಮುಂತಾದ ಮೃಗಗಳು ಭಯಪಿಹ್ವಲ ರಾದುವೆಂದೂ ತಿಳಿಯಿತು ಹಾಗೆ ಸ್ವೇಚ್ಛಾಚಾರಿಗಳಾದಾಗಲೇ ಅಂತಹ ಮೃಗಗಳನ್ನು ಕ್ರೂರಮೃಗಗಳೆನ್ನುವುದು. ಆಗಲೇ ರಾಜರಾದ ನಾವುಗಳು ಅರಣ್ಯಗಳಿಗೆ ಬಂದು ಆ ದುಷ್ಟರೆನಿಸಿಕೊಂಡ ಮೃಗಗಳನ್ನೂ ಬೇಟೆಯಾಡಿ, ಕೊಲ್ಲುವುದು.

ನಿನ್ನ ಮೃಗರಾಜ್ಯದಲ್ಲಿ ಅಂತಹ ಸ್ವೇಚ್ಛಾಚಾರಗಳು ಆಗದಂತೆ ನೋಡಿ ಕೊಳ್ಳುವುದು ನಿನ್ನ ಭಾರ. ಆ ರೀತಿ ನೋಡಿಕೊಳ್ಳುವೆಯಾ ಮೃಗರಾಜ ?

ಸಿಂಹ—(ಹೂಂಕರಿಸಿ ಸಮ್ಮತಿ ಸೂಚಿಸುವುದು)

ಶಂಬರಾಸುರ—ಒಳ್ಳೆಯದು. ನಿನ್ನ ಮಾತನ್ನು ನಂಬುತ್ತೇನೆ. ಒಂದು ವೇಳೆ ನಿನ್ನ ಪ್ರಜೆಗಳು ನಿನ್ನಾಜ್ಞೆ ಮೀರಿದರೆ ಇಕ್ಕೋ—ಈ ಸರ್ವ ಶಸ್ತ್ರವಾಹಕ ನನ್ನು ಇಲ್ಲಿಗೆ ಕಳುಹಿಸಿಬಿಡುತ್ತೇನೆ. ಎಚ್ಚರಿಕೆ ಇರುವುವೇ ?

(ಸಿಂಹ ಇರುವುದೆಂಬಂತೆ ಹೂಂಕರಿಸುವುದು)

ಶಂಬರಾಸುರ—ನಾವು ಸುಪ್ರೀತರಾದೆವು. ಮೃಗರಾಜ ! ನಿಮ್ಮ ವಾಸ ಸ್ಥಾನಕ್ಕೆ ತೆರಳಿ ಪ್ರಕೃತಿ ನಿಯಮಕ್ಕನುಗುಣವಾಗಿ ನಿಮ್ಮ ನಿಮ್ಮ ಆಹಾರವನ್ನು ನೀವು ನೀವು ಭುಂಜಿಸಬಹುದು. ಇನ್ನು ಹೊರಡು ನಿನಗೆ ಸಂತೋಷ ವಾಯಿತೇ ?

ಸಿಂಹ—(ತಲೆದೂಗಿ ಒಂದು ಸಲ ಮೇಲಕ್ಕೆ ಹಾರಿ, ಇಳಿದು, ಸರ್ವಶಸ್ತ್ರವಾಹಕ ನನ್ನು ನೋಡಿ ಮುಖದಲ್ಲಿ 'ಸುಯ್ಯು' ನೇಪಥ್ಯಕ್ಕೆ ಹೊರಡುವುದು )

ನೇಗಿಲಯೋಗಿ—ಮಹಾರಾಜನಿಗೆ ವಿಜಯವಾಗಲಿ ! ಜನನಿಬಿಡವಾದ ನಗರದಲ್ಲೂ ನ್ಯಾಯಪೂರಿತವಾಗಿರುವಂತೆ, ಅರಣ್ಯದಲ್ಲೂ ನ್ಯಾಯಪೂರಿತ ಜೀವನವೇರ್ಪಟ್ಟಿರುವುದಕ್ಕಾಗಿ ನಾವೆಲ್ಲ ಕೃತಜ್ಞರು. (ಗಟ್ಟಿಯಾಗಿ) ಎಲ್ಲರೂ ಜಯಕಾರಮಾಡಿ ! ಶಂಬರಾಸುರ ಮಹಾರಾಜನಿಗೆ ಜಯವಾಗಲಿ ! ಮಹಾ ಪ್ರಭುವಿಗೆ ಜಯವಾಗಲಿ ! (ನೇಪಥ್ಯದಲ್ಲಿ ಜಯಕಾರ)

ಶಂಬರಾಸುರ—ನನ್ನ ಪ್ರಜೆಗಳು ಸರ್ವರೂ ಕ್ಷೇಮವಾಗಿರಬೇಕೆಂದೇ ನನ್ನ ಇಷ್ಟ. ಅವರು ಸುಪ್ರೀತರಾಗಿದ್ದರೇನೇ ನನ್ನ ಮನಸ್ಸಿಗೆ ಶಾಂತಿ; ಅರ್ತ ರಾದವರು ಒಬ್ಬರಿದ್ದರೂ ದೇವ, ರಾಕ್ಷಸ, ಮಾನವ, ಮೃಗಗಳಲ್ಲಿ ಯಾರಾದರೂ ಸರಿಯೆ, ಅವರನ್ನು ಸಂತೈಸಿ ಅವರ ಇಷ್ಟಾರ್ಥ ಪೂರೈಸಿದ ಹೊರತು ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ. ಇನ್ನು ಹೊರಡುವ.

(ಎಂದು ಒಮ್ಮೆ ಸುತ್ತಲೂ ನೋಡುವಲ್ಲಿ ಗುಹೆಗೆಂದು ಹೊರಟಿದ್ದ ಸಿಂಹವು ಕತ್ತಲಾದ ಒಂದು ಪ್ರದೇಶದಲ್ಲಿ ಇನ್ನೂ ನಿಂತಿರುವುದು ಕಾಣುವುದು.)

ಶಂಬರಾಸುರ ಮೃಗರಾಜ, ಇನ್ನೂ ನಿನ್ನ ಮೊರೆಯೇನಾದರೂ ಇದೆಯೇ ?

ಸಿಂಹ—(ತನ್ನ ಪಕ್ಕದಲ್ಲಿ ಅರೆಗತ್ತಲಲ್ಲಿ ನಿಂತಿರುವ ರತಿಯೆಡೆ ಮುಖ ತಿರುಗಿಸಲು)

ಶಂಬರಾಸುರ—ಯಾರಿದು ಇಲ್ಲಿ ನಿಂತಿರುವವರು ? ರೂಪಿನಿಂದ ನಾರಿಯಂತೆ ಕಾಣುವುದು.

(ಹಾರ್ಮೋನಿಯಂ ಕಡೆ ತಿರುಗಿ ಬೆರಳುಗಳಿಂದ ತೋಫನ್ ಸವರಿಕೊಂಡು 'ಎರಡೂ ಕರೀ' ಎಂದು ತೋರಿಸುವನು. ಹಾರ್ಮೋನಿಯಂ ಆರಂಭವಾದೊಡನೆ)

ರಾಗ : ಇಂಗ್ಲೀಷು ನೋಟು. ತಾಳ : ಮಿಶ್ರ ಛಾಪು

ಯಾರ ದಿಲ್ಲಿ ನಾರೀ
ವೈಯಾರೀ ಮನೋಹಾರಿ ॥
ಯಾರ ದಿಲ್ಲಿ ನಾರೀ... ?
ಕಠಾರೀ, ಮಿಠಾರೀ, ಸುಂದ—ರೀ ॥
ಯಾರದ್ದಿಲ್ಲೀ ನಾರೀ——?
ಕಣ್ಣು ಕೋರೈಸುವ ರೂಪವೆತ್ತ ನಾರೀ ॥

ಈಕೆ ಯಾರಾಗಿರಬಹುದು ? ಮನ್ಮಥನ ಮಹಿಷಿಯಾದ ರತಿದೇವಿಯೇ ಈ ರೂಪ ತಾಳಿರಬಹುದೇ ? ಅಥವಾ ದೇವಲೋಕದ ರಂಭೆಯೋ, ತಿಲೋತ್ತಮೆಯೋ, ಮೇನಕೆಯೋ, ಯಾವ ಅಪ್ಸರೆಯೋ—ಜಿತೇಂದ್ರಿಯನಾದ ನನ್ನ ಮನಸ್ಸನ್ನು ಅಪಜಿತೇಂದ್ರಿಯಗೊಳಿಸಲು ದೇವತೆಗಳ ಹೊಂಚೇ ಇದು ? ಅಥವಾ ನನ್ನ ರಾಜ್ಯದಲ್ಲಿ ಪ್ರಜೆಗಳೂ ಮೃಗ ಪಕ್ಷಿ

ಕೀಟಗಳೂ ಕೂಡ ಸೌಖ್ಯದಿಂದರಲೂ ಕರುಬಿದ ಇಂದ್ರನೇನಾದರೂ ಅಸೂಯೆ ಯಿಂದ ತನ್ನ ಪಟ್ಟಮಹಿಷಿಯಾದ ಶಚೀದೇವಿಯನ್ನೇ ಈ ರೂಪ ಕೊಟ್ಟು ನನ್ನನ್ನು ಅಪಮಾರ್ಗಕ್ಕೆಳೆಯಲು ಹಂಚಿಕೆ ಹಾಕಿರುವನೋ ? ಹಾಗೇನಾದರೂ ಇದ್ದಲ್ಲಿ ಅವನ ಪ್ರಯತ್ನವೆಲ್ಲ ವ್ಯರ್ಥವೇ ಸರಿ. (ಪ್ರೇಕ್ಷಕರ ಕಡೆ ತಿರುಗಿ)

ಆದರೆ ಈಕೆ ಆರ್ತಳೆಂದು ಮೃಗರಾಜನ ಹೇಳಿಕೆಯಿಂದ ತಿಳಿಯುತ್ತದೆ ಯಾಗಿ ಆರ್ತರಾಗಿ ನನ್ನಲ್ಲಿಗೆ ಬಂದವರ ಮೊರೆ ಕೇಳಿ ಅವರ ಇಷ್ಟಾರ್ಥ ಸಲ್ಲಿಸು ವುದೇ ನನ್ನ ಕರ್ತವ್ಯವಲ್ಲವೇ ? ಈಕೆ ಯಾರೋ ಕಾಣೆನಲ್ಲಾ

ಹಾಡು : ರಾಗ ? ತಾಳ ?

**ಯಾರು ಕಾಣೆ ನಾಂ ಈಕೇ ।**

**ಅಂದ ದಾರ ವಿಂದ ವದನೇ ॥**

(ರಂಗದ ಬೆಳಕು ಹೆಚ್ಚು ಮಾಡಲು ರತಿಯ ಮುಖವನ್ನು ಚೆನ್ನಾಗಿ ನೋಡಿ)

ಭದ್ರೆ ! ನೀನಾರು ? ಎಲ್ಲಿಂದ ಇಲ್ಲಿಗೈತಂದೆ ? ಈ ಘೋರಾರಣ್ಯದಲ್ಲಿ ಒಂಟಿಗನಿಯಾಗಿ ಹೇಗೆ ಮುಂದಡಿಯಿಡುವೆ ? ನಿನ್ನ ಕಣ್ಣುಗಳಲ್ಲಿ ನೀರು ಹನಿ ಯೇಕೆ ? ನಿನ್ನನ್ನು ಪೀಡಿಸುತ್ತಿರುವ ದುಃಖವ್ಯಾವುದು ? ಶೀಘ್ರವಾಗಿ ಒರೆ ದರೆ ನಿನ್ನ ದುಃಖ ಪರಿಹರಿಸಲು ನಾನು ಸಿದ್ಧನಾಗಿರುವೆನು. ದುಃಖಾರ್ತರಾದ ವರಿಗೆ ದುಃಖ ಪರಿಹರಿಸುವ ಖ್ಯಾತಿಯುಳ್ಳ ಶಂಬರಾಸುರನ ಹೆಸರು ಕೇಳಿಬಲ್ಲೆ ಯಲ್ಲವೇ ? ನಾನೇ ಶಂಬರಾಸುರ. ನಿನ್ನ ದುಃಖವೇನೆಂಬುದನ್ನು ಧೈರ್ಯ ವಾಗಿ ಹೇಳು ಮಹಿಳಾಮಣಿ !

ರತಿ—(ಮುಂದೆ ಬಂದು) ಮಹಾರಾಜನಿಗೆ ವಿಜಯವಾಗಲಿ. ನಿಮ್ಮ ಆಶ್ವಾಸನದಿಂದ ನನ್ನ ಕಷ್ಟ ಪರಿಹಾರವಾದಂತೆಯೇ ಎಣಿಸುವೆನು. ಕೃತಾರ್ಥ ಳಾದೆನು ಮಹಾರಾಜ !

**ಶಂಬರ**—ಸಂತೋಷ ! ಎಲೌ ಭದ್ರೆ ! ನೀನು ತುಂಬ ಆಯಾಸ ಗೊಂಡಂತಿದೆ. ನಮ್ಮ ಅರಮನೆಗೆ ನಮ್ಮ ರಥದಲ್ಲಿ ತೆರಳುವಳಾಗು. ರಾಣೀ ವಾಸದವರು ನಿನ್ನನ್ನು ಆದರಿಸುವರು. ಅಲ್ಲಿ ವಿಶ್ರಮಿಸಿ ನಮ್ಮ ಆತಿಥ್ಯ ಸ್ವೀಕರಿಸಿ ನಾಳೆಯ ದಿನ ಆಸ್ಥಾನದಲ್ಲಿ ನಮ್ಮನ್ನು ಕಂಡು ನಿನ್ನ ಮೊರೆಯನ್ನು ಬಿನ್ನವಿಸಬಹುದು. ಒಪ್ಪಿಗೆಯೋ ?

**ರತಿ**—ಮಹಾರಾಜರು ಅಪ್ಪಣೆ ಕೊಡಿಸಿದಂತೆ ...ಆದರೆ......

**ಶಂಬರ**—ನಿನಗೇನಾದರೂ ಶಂಕೆಯೋ ? ನಮ್ಮನ್ನು ಕಂಡರೆ ಅಂಜಿಕೆಯೋ ?

**ರತಿ**—ಅದೇನೂ ಅಲ್ಲ ಮಹಾರಾಜ ! ತಮ್ಮ ಅಂತಃಪುರದ ರಾಣೀವಾಸದವರಿಂದ ಆದರಾತಿಥ್ಯಗಳನ್ನು ಸ್ವೀಕರಿಸುವುದರಲ್ಲಿ ನಾನು ಧನ್ಯಳೇ ಆದೆ. ಆದರೆ ನನ್ನ ಮೊರೆಯನ್ನು ನಾಳಿನ ಆಸ್ಥಾನದ ವೇಳೆಯವರೆಗೂ ಸಲ್ಲಿಸದೆ ಇರಲಾರೆ. ಅಪ್ಪಣೆಯಾದರೆ....

**ಶಂಬರ**—ಈಗಲೇ ಬಿನ್ನವಿಸುವೆಯೆನ್ನುವೆಯಾ ? ಆಗಬಹುದು.

**ರತಿ**—ನನ್ನದೊಂದು ಪ್ರಾರ್ಥನೆಯಿದೆ.

**ಶಂಬರ**—ನೀನಾರೆಂಬುದೇ ನನಗೆ ಹೇಳಲಿಲ್ಲವಲ್ಲ ? ಆದರೂ ಸರಿ— ನಿನ್ನ ಪ್ರಾರ್ಥನೆಯೇನೋ ಅದನ್ನು ಒರೆ !

**ರತಿ**—ತಮ್ಮ ವಾಗ್ದಾನವಾದ ನಂತರ ಹೇಳುವೆ.

**ಶಂಬರ**—ಹೆಣ್ಣು ಜೀವ ಎಷ್ಟಾದರೂ ಹೆಣ್ಣೇ: ಗಂಡಸರಲ್ಲಿ ಯಾವಾಗಲೂ ಅಪನಂಬಿಕೆಯೋ—ಇರಲಿ, ಎಲೌ ! ಭದ್ರೆ ! ನಿನ್ನ ಪ್ರಾರ್ಥನೆಯನ್ನು ಮನಸಾ ಮನ್ನಿಸುವೆ.

**ರತಿ**—ಕೃತಾರ್ಥಳಾದೆ. ನನ್ನದೊಂದು ವ್ರತವಿದೆ.

**ಶಂಬರ**—ವ್ರತವಿದ್ದರೆ ವರ್ತಿಸು. ಏನಭ್ಯಂತರ ?

**ರತಿ**—ಅದು ಕಠಿಣವಾದ ವ್ರತ. ಆರು ಮಾಸಗಳವರೆಗೆ ನಿಮ್ಮ ರಾಣಿವಾಸದಲ್ಲಿ ಯಾವ ಗಂಡಸೂ ನನ್ನನ್ನು ನೋಡಬಾರದು. ಸ್ವಯಂ ಮಹಾರಾಜರೂ ನೋಡಬಾರದು. ಹಾಗೆ ನೋಡಿದಲ್ಲಿ ಹಾನಿ ತಟ್ಟುತ್ತದೆ.

**ಶಂಬರ**—ಹಾನಿ ತಟ್ಟುತ್ತದೆಯೋ ? ಯಾರಿಗೆ ? ನಿನಗೇ ?

**ರತಿ**—ನನಗಲ್ಲ ಮಹಾರಾಜ. ನನ್ನನ್ನು ನೋಡಿದವರಿಗೆ !

**ಶಂಬರ**—(ಯೋಚಿಸಿ) ಹಾಗೋ ? ನಿನ್ನ ವ್ರತ ಆರಂಭ ಯಾವಾಗ ?

**ರತಿ**—ತಾವು ವಾಗ್ದಾನ ಮಾಡಿದೊಡನೆ ?

ಶಂಬರ—(ಪುನಃ ಯೋಚಿಸಿ)

ನಾಳೆ ನನ್ನ ಬೆಳಗಿನ ಪೂಜಾದಿ ವಿಧಿಗಳನ್ನು ತೀರಿಸಿದೊಡನೆಯೇ ವಾಗ್ದಾನ ಕೊಡುವೆ. ಅಲ್ಲಿಯವರೆಗೆ ಅವಕಾಶವಿದೆಯೋ ?

ರತಿ—ಇದೆ ಮಹಾರಾಜ !

ಶಂಬರ—ಸರಿ ! ನಾಳೆ ವಾಗ್ದಾನ ಕೊಡುವೆ. ಈಗ ವೇಳೆಯಾಯಿತು. ರಥವನ್ನೇರಿ ನೀನು ಹೊರಡು. ನಾನೂ ಪರಿವಾರವೂ ಹಿಂದಿನಿಂದ ಆಗಮಿಸುತ್ತೇವೆ.

ಪರಾಕಿನವರು—ಭೋ ಪರಾಕ್—ಮಹಾರಾಜರು ನಗರಕ್ಕೆ ಹಿಂದಿರುಗುವರು ! ಪರಿವಾರವೆಲ್ಲ ಹಿಂಬಾಲಿಸಲಿ ! ಜಯವಾಗಲಿ ಚಂಡ ಮಾರ್ತಾಂಡ ತ್ರಿಲೋಕ ದಿಗ್ವಿಜಯೀ ಸಾರ್ವಭೌಮ ಶಂಬರಾಸುರ ಮಹಾರಾಜರಿಗೆ ಜಯವಾಗಲಿ ! ಭೋ ಪರಾಕ್ ! ವಿಜಯಗೀತೆ ಹಾಡಿರಿ.

ಎಲ್ಲರೂ ರಾಗ : ಇಂಗ್ಲೀಷು ನೋಟು, ತಾಳ : ಏಕ.

**ಬನ್ನಿರಿ ನಾವ್ ಪೋಗುವಾ ।**
**ನಗರವನೇ ನಾವ್ ಸೇರುವಾ ॥**
**ಬನ್ನಿರಿ ನೀವ್ ಪೋಗುವಾ ॥**

(ಬೇಗನೆ ಹೆಜ್ಜೆ ಹಾಕುತ್ತ)

**ಬನ್ನಿರಿ ಪೌರರೆ ನೀವೀಗ**
**ನಗರವ ಸೇರುವ ಬಲುಬೇಗ !**
**ಇಲ್ಲಿ ಕೆಲಸವಿನ್ನಿಲ್ಲವೂ ನಾವು ಬಲ್ಲೆವೂ**
**ಬನ್ನಿರಿ ಪೌರರೇ ನೀವೀಗ.......**

(ಸಿಂಹವು ಅರಣ್ಯದ ಕಡೆಯ ನೇಪಥ್ಯಕ್ಕೂ ಶಂಬರಾಸುರ, ರತಿ, ಪರಿವಾರದವರು, ಇವರೆಲ್ಲ ನಗರದ ಕಡೆಯ ನೇಪಥ್ಯಕ್ಕೂ ತೆರಳುವರು.)

—'ಆ' ರಂಗದ ಪರದೆ ಬೀಳುವುದು—

—ಆ ಗ್ರೀನ್ ರೂಮಿನ ಫರದೆ ಏಳುವುದು—

(ಪಾತ್ರಧಾರಿಗಳು ಅವರವರ ಬಟ್ಟೆ, ಒಡವೆ ತೆಗೆದಿಡುತ್ತ) "ಅಬ್ಬ, ಸದ್ಯ ಮುಗೀತಲ್ಲಪ್ಪಾ ಸೀನು—ಅದೇನು ಉದ್ದುದ್ದ ಸೀನೂ, ಅದೇನು ಉದ್ದುದ್ದಾ ಮಾತುಗಳೂ—ಅದೂ ಎಲ್ಲ ಒಬ್ಬನ ಬಾಯಿಂದ್ಲೇನೇ—ನಮಗೆಲ್ಲಾ ಹುಚ್ಚು ಹಿಡಿಯೋದೊಂದು ಬಾಕಿ" ಎಂದು ಒಬ್ಬೊಬ್ಬರು ಒಂದೊಂದು ವಿಧವಾಗಿ ಮಾತನಾಡಿಕೊಳ್ಳುತ್ತಿರುವರು.

**ಮೂರ್ತಿ**—ಲೇ! ಮಾತು ನಿಲ್ಲಿಸ್ರೋ! ಆಗ್ಹೋದ ಸೀನು ಕಟ್ಟಿ ಕೊಂಡೇನ್ರೋ ಈಗಾ! ಈಗ ಮುಂದಾಗಬೇಕಲ್ಲಾ ಕಾಮಿಕ್ ಸೀನೂ, ಅದರ ಅರ್‍ರೇಂಜುಮೆಂಟೆಲ್ಲಾ ನೋಡ್ರೋ ಮೊದಲು. ಎಲ್ರೋ ಆ ತರಕಾರಿ ಮಾರ್ಕೆಟ್ಟು ಈ ಬಾಬ್ತುಗಳೆಲ್ಲಾ?

**ರಂಗೂ**—ಲೇ ಮೂರ್ತಿ! ಅದೆಲ್ಲಾ ಅಲ್ಲಿ ನೋಡು! ಫರದೇ ಹಿಂದೇನೇ ಎಲ್ಲಾ ಅರ್‍ರೇಂಜು ಮಾಡಿದೀನಿ. ಈಗ ಸದ್ಯ ಇವರೆಲ್ಲಾ ಮೇಕಪ್ ತೆಗೆದು ಹಾಕಿ ಆ ಸೀನಿಗೆ ಡ್ರೆಸ್ ಮಾಡೋದರ ಒಳಗಾಗಿ ಅಲ್ಲೊಂದು ಏನಾದ್ರೂ ಮಾನೋ ಟರ್ನು ಒಂದು ಕೊಡ್ತೀಯಾ? ಇಲ್ಲಾ ಅದೂ ನಾನೇನೋ? ಆಡಿಯನ್ಸು ರೆಸ್ಟಿವ್ ಆಗಿಬಿಡ್ತಾರೆ.

**ಮೂರ್ತಿ**—ನಾನೂ ಅಲ್ಲ; ನೀನೂ ಅಲ್ಲಮ್ಮಾ. ಲೋ! ಅವನು ಸೀರೇಗೆ ಜಗಳ ಆಡಿದಾಗಲೇ ಗೊತ್ತಾಗಲಿಲ್ವೇನೋ? ಅವನೇ ಕಿರ್ಲಿದ—ಮೊದಲು ರತಿ ಆಮೇಲೆ ಅಪ್ ಟು ಡೇಟ್ ಅಮ್ಮಯ್ಯಾಂತ. ಈಗ ಸುಬ್ಬು, ಲೇ! ಬೇಗ ಡ್ರೆಸ್ ಮಾಡಿಕೊಂಡು ಹೋಗಮ್ಮ. ಆಡಿಯನ್ಸ್‌ನ ಕಾಯಿಸಬೇಡ. ದಮ್ಮಯ್ಯ ಹೋಗ್ರೋ ಬೇಗ—ಕಿತ್ಹಾಕಿ ಆ ಸೀರೇನಾ. ಈ ದ್ವಾವಣಿ—ಆ ಜರೀ ಲಂಗ ತಗಲಿಸ್ಕೊಂಡು ಆ ಎತ್ತರದ್ ಹೀಲಿನ ಮೂಸು ಬಿಕ್ಕೊಂಡು, ಕೈಲಿ ಒಂದು ಆ ಪ್ಯಾರಾಸೋಲ್ ಎತ್ತಿಕೊಂಡು. ಯಾವ ಅಮ್ಮಯ್ಯಾ ಇಷ್ಟು ಅಪ್ ಟು ಡೇಟ್ ನೋಡೋಣ? ಸ್ವಲ್ಪ ರು. ಆ ಸೈಡ್ ಪಾರ್ಟಿಂಗ್ ಸರಿಯಾಗಿ ಎತ್ತು—ಈ ಹಳೇಕಾಲದ ಒಡವೆ ಕಿತ್ತು ಬಿಸಾಕು, ಒಂದೆರಡು ಲೋಲಾಕು ತಗುಲಿಸ್ಕೊಳ್ಳೋ! ಇನ್ನು ನಡಿ!.... ಒಳ್ಳೇ ಅಕ್ಷರುಗಳು!

ಎಲ್ಲದಕ್ಕೂ ನಾನು ಸೊಂಟ ಕಟ್ಟಿ ಜಟ್ಟಿ ಹಾಗೆ ನಿಂತು ಜಗ್ಗಿಸಿದರೇನೇ ಇವರೆಲ್ಲಾ ಜಗ್ಗೋದು !

ಇನ್ನು ಹೋಗಮ್ಮಾ ಬೇಗ ! ಬಡುಕೊಂಡಾರು ಆಡಿಯನ್ಸೂ !

(ಸಾಲಂಕೃತವಾದ ಸುಬ್ಬು 'ಅ' ರಂಗದಾಟಿ 'ಆ' ರಂಗದ ಕಡೆ ಹೋಗಿ ಸೈಡ್ ವಿಂಗ್ಸ್‌ನಲ್ಲಿ ನಿಂತು ಘರದೆ ಮೇಲಕ್ಕೆತ್ತಲು ಸೂಚಿಸುವನು )

ಮೂರ್ತಿ—ಈ ಕಾಮಿಕ್ ಸೀನು ಆಗುತ್ತಲೂ ಇನ್ನೇನು ಇದೇ ಅಂತ ಆಡಿಯನ್ಸು ಯೋಚನೆ ಮಾಡೋಷ್ಟರಲ್ಲಿ ಹೊಡೆದು ಬಿಡಬೇಕು ಇನ್ನೊಂದು ಆಕ್ಟು. ಅದಾದ ಮೇಲೆ ಒಂದು ಸಣ್ಣ ಕಾಮಿಕ್ಕು, ಆಮೇಲೆ ಕೊನೆ ಆಕ್ಟು. ತೀರಿಹೋಯಿತೋ ಈ ದಿನದ ಋಣ ಸದ್ಯ ! ಶಂಬರನ ೨ನೆ ಆಕ್ಟಿಗೆ ಪ್ರಿಪೇರ್ ಮಾಡಿಕೊಳ್ಳೋ !

ರಂಗೂ ಮುಂತಾದವರು—ಲೇ ನಿನ್ನ ಕೆಲಸ ನೀನು ನೋಡಮ್ಮಾ ! ನೀನೇ ಕಂಡಿರೋನು, ಮಹಾ ! ನಾಟಕ ಹೇಗೆ ಆಡ್ಸೋದೂ ಅಂತ. ನಿನ್ನ ಎರಡನೇ ಅಂಕದ ಶಂಬರನ ಅಲಂಕಾರ ಮುಗಿಸಿ ರೆಡಿಯಾಗಿರು—ನಾವು ಮಾರ್ಕೆಟ್ಟು ಸೀನು ಮುಗಿಸೋ ಹೊತ್ತಿಗೆ—

('ಅ' ಪರದೆ ಬೀಳುವುದು)

ಎಂಬಲ್ಲಿಗೆ 'ಶಂಬರನ ಶೃಗಾರ' ದ ಮೊದಲನೆಯ ಅಂಕ ಪ್ರವೇಶವು ಸಮಾಪ್ತವಾದಂದು.

## ಉಪನಾಟಕ—ದೃಶ್ಯ

( 'ಆ' ರಂಗದ ಪರದೆ ಏಳುವುದು )

[ ಪ್ರವೇಶ : ಅಪ್ ಟು ಡೇಟ್ ಅಮ್ಮಯ್ಯ, ವಾರೆ ಬೈತಲೆ ತೆಗೆದು ರಿಬ್ಬನ್‌ಕಟ್ಟಿದ ಎರಡು ಜಡೆ. ಎದ್ದು ಕಾಣುವ ಹೇರ್ ಪಿನ್ನುಗಳು, ಪ್ಲ್ಯಾಸ್ಟಿಕ್ಕಿನ ಮಲ್ಲಿಗೆ ದಂಡೆ, ಹೊಳೆಯುವ ಲೋಲಾಕು, ಹಣೆಗೆ ಸಣ್ಣ ಸಾದುಚುಕ್ಕೆ, ಹುಬ್ಬುಗಳ ನಡುವೆ ಕಚ್ಚಿರುವ ಫ್ರೇಮ್ ಇಲ್ಲದ ದಪ್ಪಗಾಜಿನ ಕನ್ನಡಕ, ಪಕ್ಕಿ ಜರತಾರಿ ಕೆಲಸದ ಲಂಗ, ಮೇಲೆ ಸೀರೆ ಋಂತೆ ದ್ಹಾವಣಿ, ಮೊಂಡುಸೆರಗು, ಎಡಭುಜದ ಮೇಲೆ ನೆರಿಗೆ ಜೋಡಿಸಿ 'ಬ್ರೂಚ್' ಸಿಕ್ಕಿಸಿದೆ, ತೋಳು ಅರ್ಧಮುಚ್ಚಿ ಗುಪ್ಪು ಕಟ್ಟಿರುವ ಕುಪ್ಪಸ, ಜಾರ್ಜೆಟ್ ತೆಳು ದ್ಹಾವಣಿ ಸೀರೆ, ಸ್ಟಾಕಿಂಗ್ಸ್‌ನ ಮೇಲೆ ಪಾದಗಳು ಮೆಟ್ಟಿರುವ ಎತ್ತರ ಹಿಮ್ಮಡಿಯ ಸ್ಲಿಪ್ಪರು, ಒಂದೇ ಕೈಗೆ ತುಂಬ ನಿಗಿನಿಗಿಸುತ್ತಿರುವ ಬಳೆಗಳು, ಕೈಯಿಂದ ಕೈಗೆ ಬದಲಾಯಿಸುತ್ತಿರುವ

ಒವ್ಮೊಮ್ಮೆ ತೆರೆದು ಮುಚ್ಚುತ್ತಿರುವ ಪ್ಯಾರಾಸೋಲ್ (ಆಧುನಿಕ ಹೆಣ್ಣು ಛತ್ರಿ)-ಭುಜಕ್ಕೆ ಸಣ್ಣ ಸ್ಟ್ರಾಪ್‌ನಿಂದ ನೇತುಹಾಕಿರುವ ವ್ಯಾನಿಟಿ ಬ್ಯಾಗ್--ಹೀಗೆ ಅಲಂಕೃತಳಾಗಿ ರಂಗದ ಮಧ್ಯೆ ಬಳುಕುತ್ತ ಬಂದು ಹಾರ್ಮೋನಿಯಂ ಕಡೆ ದೃಷ್ಟಿಹಾಯಿಸಿ ಕೈಯ ದಂತದ ಹಿಡಿಯ ಮೇಲೆ ಎರಡು ಬೆರಳನ್ನಿಟ್ಟು ಶ್ರುತಿ ತೋರಿಸಿ ಆರಂಭಿಸುವಳು. ರಂಗಭೂಮಿಯ ಆ ಕಡೆ ಈಕಡೆ ಯಥಾ ಸಾವಕಾಶವಾಗಿ ಓಡಿಯಾಡುತ್ತ ಪದ್ಯ-ಗದ್ಯ ಹೇಳುವಳು.]

ರಾಗ—ಹಮೀರ್ಕಲ್ಯಾಣಿ ತಾಳ—ಏಕ--ಮಿಶ್ರನಡೆ

Verse — ಚರಣ

From what my mother has said to me
The girls of to day are certainly
Much altered to what they used to be
When mother was twenty one:
( Says ) girls of her days stop'd indoors all day
At eve went to temples to worship and pray
An ಅಷ್ಟಾಂಗ ಕುಂಕುಮ party once in a way
Contented them every one

Chorus — ಪಲ್ಲವಿ

When mother was twenty one,
The girls didn't have much fun,
They didn't stop out very late till dark
Prancing in Lalbagh or Cubbon Park;
Soon as their schools were done,
Homewards they had to run;
I am sure that women
Had a rotten time then
When mother was twenty one.

Patter I

ವಿನ್ನಾರಿಬಲ್ ನೋಡಿಂಪ್ರೆ —" At eve went to temples to worship and pray " ಅಂತೆ ! Men ಹಾಗೆ! ಒಂದ್ಮಂತ್ರ ಗೊತ್ತಿಲ್ಲ — ಹಿಂದ್ ತಂತ್ರ ಗೊತ್ತಿಲ್ಲ ! —templeಗ್ಹೋಗಿ—ಒಂದ್ಹಾಟಿನ್ cocoanut

break ಮಾಡಿ ಒಂದ್ಬೀಸಿಟ್ಬಿಡೋಂತೆ ಅಲ್ಲಿ. ಇನ್ನೊಂದ್ಬೀಸ್ ಮನೇಗ್ತಂದು ಚಟ್ನಿ prepare ಮಾಡಿತಿನ್ನೋದಂತೆ! ಇದೇ religious ಆಗಿದ್ದದ್ದವ್ರು!— ಏನ್ಹಾರಿಬಲ್ ನೋಡೀಂದ್ರೆ! ಇನ್ನಿವರ್ Famous ಅಷ್ಣ್ರಕುಂಕ್ಮ party ....stuffy roomನಲ್ಲಿ squat ಮಾಡ್ಕೊಂದು.. squeaky voicesನಲ್ಲಿ shriek ಮಾಡೋದು—ಹಣೇಗ್ saffron ಹಚ್ಕೊಂಡು ಹೊಡ್ಕೋರ್ದ್ಮನೇ ಕಡೆ! ಇದೇ ಇವರ್ recreationoo! ಏನ್ಹಾರಿಬಲ್ ನೋಡೀಂದ್ರೆ!

Verse — ಚರಣ

What my mother dreads most now-a-days
Is the bicycling girl that at Badminton plays
Be- ribbons her plait and powders her face
Dead to sneers and sniggers of scorn!
Mother swears she never used powder and puff
Found saffron and turmeric good enough stuff,
Drawing water from wells recreation enough
When mother was twenty one.

Chorus — ಪಲ್ಲವಿ

When mother was twenty one
The girls did fashion shun:
They didn't part their hair at the side
Wear boots and wrist watches and brooches beside;
Soon as they could walk
With men were forbldden to talk:
Rose up with the lark, slaved at home till't was dark
When mother was twenty one.

Patter II

ಈ ಕಾಲ್ದಲ್ಲಿ girls ಏನ್ಮಾಡಿದ್ರೂ ತಪ್ಪೇ time waste ಮಾಡ್ಕೊಡ್ತಾಂತ...ಒಂದ್ bicycle ಮೇಲ್ಕೋದ್ರೆ...ಬೈಸ್ಕೊಳ್ಳೋದೇನೇ ಲಾಭ!... ಮಧ್ಯದಲ್ಲೇ hair part ಮಾಡ್ಕೊಂಡ್ರೆ thin ಆಗುತ್ತೆ growthoo ಅಂತ

side part ಮಾಡ್ಕೊಳ್ಳೋದ್ರಷ್ಟೇ ? Middle ನಲ್ಲಿ ಬೈತಲೆ ತಕ್ಕೊಂಡು ಮೂವತ್ತ್ರಲ್ bald ಆದವ್ರು ಎಷ್ಟ್ಜನ ಇಲ್ಲ ಈ ಕಾಲ್ದಲ್ಲಿ... ಇನ್ನಿತ್ತ್ಯ ಒಂದೊಂದ್ಸಾರು ಕಿತ್ತು ಕಟ್ಕೋಳ್ಳೋಕಂತ ನಾಲಕ್ಸ್ನ ನಿಲ್ಲಲೀಂತ ಒಂದ್ ribbon ಕಟ್ಕೋಳ್ಳೋದ್ಪಾಪಾನೇ?..ಏನ್ ಹಾರಿಬಲ್ ನೋಡೀಂದ್ರೆ! mother ಕಾಲ್ದಲ್ಲಿದ್ದ wellsನೆಲ್ಲಾ ಮುಚ್ಚಿಟ್ಟು ಕೊಳಾಯಿ ಇಟ್ಟಿರೋದ್ನ ಪಾಪ್ಷ್ಟೆ ಸೀರ್ಸೇದೋ exerciseಗೆ ಬದ್ಲಾಗಿ badminton ಆಡೋ ಣಾಂದ್ರೆ ಅದಕ್ಕೊಂದ್ಕೊಂಬ್ತಾನೇ! ಇನ್ mother ಕಾಲ್ದಲ್ಲಿ muddy roads ಆಗಿದ್ದು .ಬರೀ ಕಾಲ್ನಲ್ಲೋಗೋದು harmless ಆಗಿತ್ತು. ಈ metalled roads ಕಾಲ್ದಲ್ಲಿ bare-footed ಆಗಿ ಬೆಣಚ್ಕಲ್ಮೇಲ್ನಡದು bleeding soles ಆಗೋದು ಒಂದ್ beautyನೇ! ...ಏನ್ horribly nnfair ನೋಡೀಂದ್ರೆ!

Verse—ಚರಣ

From what my mother shrieks night and day
The girls today are too giddy and gay
To walk through their lives in a womanly way
As she did at twenty one!
(Says) "Woman should have but one aim in life,
That's to be a kind mother and a dutiful wife,
And keep her home free from misery and strife"
As she did at twenty one!

Chorus—ಪಲ್ಲವಿ

When mother was twenty one,
Publicity women did shun;
They did'nt give lectures or parties gay
Shrieking and shouting for manly sway.
Soon as they were wed
To the rest of the world they were dead;
And of their own accord
Were the slaves of their lords
When mother was twenty one.

## Patter III

ಓ! ಹೋ! ಹೋ! "Of their own accord were the slaves of their lords!" ಏನ್ಸ್ಹೇಳ್ಕೋಡೀಂದ್ರೆ! ಇಷ್ಟಕ್ಕೂ facts ಏನು? ಆರಳ್ಸ್ಟೇರ್ಡದೊಳ್ಗೆ ಮಸೀಮುಖ್ದ್ವಿನ್ಗ್ marriage ಮಾಡ್ಕೊಂಡ್ದೊಂದು ಮಗಳ್: ಇನ್ನವನಿಗೆ ಅಡಿಗೆಯುವ್ಕೆಲ್ಸ ಅವನ್ಸ್ತಿಕ್ಕಿಗಾಯಾಕೆಲ್ಸ ಮಾಡ್ಕೊಂಡು ಆಕಳ್ ಹಾಗೆ ಆಯುಸ್ಸೆಲ್ಲಾ ಬಿದ್ದಿರ್ಬೇಕಂತೆ womenoo! ಯಾಕೋ ಕಾಣೆ motherನ "ವಿಲಾಯ್ತೀಲಿ women ಎಲ್ಲಾ war ಗೆ ಹೋಗಿ vote ಗ್ಳ ಸಂಪಾದಿಸಿದ್ಧಾರೆ ಅಂದರೆ" ಸರಿ! ನೀವೆಲ್ಲಾ Carvalry ಸೇರ್ಬಿಡಿ!— ಆದ್ರೆ ಸದ್ಯ ಮನೇಲಿರೋ Infantry ನ್ನೋಡ್ಕೊಳ್ಳೋವ್ರ್ಯಾರೂ?"ಂ ತಂದ್ಬಿಡ್ತಾಳೆ. Men ನ್ನೇ ಬಲು up-to-date community ಅಂತ್ಹೆಸರು—"ವಿಪ್ರಾಃ ಪಶ್ಚಿಮ ಬುದ್ಧಯಃ" ಅಂತೆ—ಆದೇನ್ western-minded ಹೋ, Brahminsoo time ಏ ತೋರಿಸ್ಬೇಕು! ಇಷ್ಟಕ್ಕೂ mother ಏನ್ peace—minded pigeon ಆಗಿದ್ಲೋ? ಅದೆಲ್ಲ ಅಜ್ಜೀನ್ಕೇಳಿದ್ರೆ ಗೊತ್ತಾಗತ್ತೆ— ಬರಲೂಂದ್ರೀಗ್ಲೂ ಬೆದರ್ತಾನೆ ಅಪ್ಪ.

### Chorus End—ಪಲ್ಲವಿ ಅಂತ್ಯ

**She I'm sure in her day**
**Kept poor father at bay**
**When my mother was twenty one.**

**(ಅಪ್‌ಟುಡೇಟಮ್ಮಯ್ಯನ ನಿಷ್ಕ್ರಮಣ)**

**( ಆ ರಂಗದ ಪರದೆ—ಅಂಕದ ಪರದೆ ಬೀಳುವುದು—)**

# ಅಂಕ ೨ ಪ್ರಯಾಸ

('ಆ' ರಂಗದ ಪರದೆ ಏಳುವುದು. ಶಂಬರಾಸುರನ ಚಿಕ್ಕ ಆಸ್ಥಾನ ಮಂದಿರ. ಪೂಜಾದಿಗಳನ್ನು ಮುಗಿಸಿ ರಾಜನು ಸಿಂಹಾಸನಾಸೀನನಾಗಿದ್ದಾನೆ. ವಿದೂಷಕ ಪಕ್ಕದಲ್ಲಿ ನಿಷಣ್ಣನಿದ್ದಾನೆ. ಪ್ರಹರಿ, ಚಾರ, ಚಾಮರ-ಸೇವಿಕೆಯರು ಮರ್ಯಾದೆಯಿಂದ ದೂರದಲ್ಲಿ ನಿಂತಿದ್ದಾರೆ ಆಡುವ ಮಾತು, ಹೇಳುವ ಹಾಡು, ಎಲ್ಲವೂ ಅಕ್ಷರಶಃ ಅಭಿನಯಪೂರ್ವಕ ವಾಗಿರುತ್ತವೆ)

ಶಂಬರಾಸುರ—ಮಿತ್ರಾ, ಮಾಂಡವ್ಯ! ನಿನ್ನೆ ಅರಣ್ಯದಲ್ಲಿ ಏಕಾಂಗಿನಿಯಾಗಿ ದುಃಖಾರ್ತಳಾಗಿ ನಿಂತಿದ್ದ ಲಲನಾಮಣಿಯನ್ನು ನೋಡಿದಾಗಿನಿಂದ ನನ್ನ ಮನವೆಲ್ಲವೂ ಅವಳಲ್ಲಿಯೇ ಲೀನವಾಗಿದೆ. ನಾನಾಗಿ ಅವಳನ್ನು ಅಪೇಕ್ಷಿಸುವುದು ರಾಜಯೋಗ್ಯವಲ್ಲ. ಹೆಣ್ಣು ತಾನಾಗಿ ಒಲಿದು ಬಂದರೆ ಅವಳ ಇಷ್ಟಾರ್ಥ ಪೂರೈಕೆಯೇ ರಾಜನ ಕರ್ತವ್ಯ. ಏನೆನ್ನುವೆ ?

ವಿದೂಷಕ—ಮಹಾರಾಜ! ನೀನು ಬೇಟೆಗೆಂದು ಅರಣ್ಯಕ್ಕೆ ಹೋಗುವುದೇ ಅಪರೂಪ. ನಿನ್ನ ಹೆಸರು ಕೇಳಿದರೇನೇ ದುಷ್ಟರೆನ್ನಿಸಿಕೊಂಡ ಮೃಗಗಳೂ ಸಾಧುವಾಗುತ್ತವೆ! ವನ್ಯಮೃಗಗಳಲ್ಲೇ ಹೀಗಾದ ಮೇಲೆ ವನ್ಯಮಾನವಿಯಾದ ಈಕೆಯು ಪಾಡೇನು ? ಇಲ್ಲಿಗೆ ತಾನಾಗಿ ಬಂದು ತನ್ನ ಅಭೀಷ್ಟವನ್ನು ಸಲ್ಲಿಸೆಂದು ಕೇಳಿಕೊಳ್ಳುವುದೇನೂ ಆಶ್ಚರ್ಯವಲ್ಲ. ಬರಲಿ, ಏನು ಹೇಳುವಳೋ ನೋಡುವ

ನಿನಗೇನೋ ಮನವು ಅವಳಲ್ಲಿ ನೆಟ್ಟು ಅನ್ನಾಹಾರ ನಿದ್ರೆಗಳು ಬೇಡವಾಗಿದೆ. ಆದರೆ ನಿನ್ನ ಮಿತ್ರನಾದ ನನಗೂ ನಿನ್ನೆಯಿಂದ ಇದೇ ದುರವಸ್ಥೆಯೇ ? ಸದ್ಯ ಈ ಅವಸ್ಥೆಯಿಂದ ನಾವಿಬ್ಬರೂ ಎಂದಿಗೆ ಪಾರಾದೇವೋ, ಎಂದಿಗೆ ಮೃಷ್ಟಾನ್ನ ಭೋಜನ ಮಾಡಿ ಸುಖವಾಗಿ ನಿದ್ರಿಸಿಯೇವೋ ಎಂದೆನ್ನಿಸುತ್ತಿದೆ ನನಗೆ ಈಗ!

ಶಂಬರಾಸುರ--ಸರಿ. ಯಾವಾಗಲೂ ನಿನಗೆ ಭೋಜನ, ಅನಂತರ ಶಯನ, ಇದೇ ನಿತ್ಯ ಚರ್ಯೆಯಾಗಿರುವಂತಿದೆ. ಇರಲಿ.

ಚಾರ (ಪ್ರವೇಶಿಸಿ) —ಮಹಾರಾಜನಿಗೆ ವಿಜಯವಾಗಲಿ. ರಾಣೀವಾಸ ದಿಂದ ಓರ್ವ ಮಹಿಳಾಮಣಿಯು ಸಾರ್ವಭೌಮರ ದರ್ಶನಾಕಾಂಕ್ಷಿಯಾಗಿ ಧ್ವಾರದಲ್ಲಿ ಕಾದಿರುವಳು.

ಶಂಬರಾಸುರ--ವಿದೂಷಕ ! ಈಗ ನಿನ್ನ ಬುದ್ಧಿ ಕುಶಲತೆಯ ಪ್ರದ ರ್ಶನಕ್ಕೆ ಒಳ್ಳೆಯ ಅವಕಾಶ (ಚಾರನಿಗೆ) ಆಕೆಯನ್ನು ಸಕಲ ಮರ್ಯಾದೆ ಗಳೊಡನೆ ಬರಮಾಡು.

ರತಿ (ಪ್ರವೇಶಿಸಿ) —ಮಹಾರಾಜನಿಗೆ ವಿಜಯವಾಗಲಿ! ನಿನ್ನ ತಿಳಿಸಿ ದ್ದಂತೆ ನನ್ನ ಬಿನ್ನಪವನ್ನರ್ಪಿಸಲು ಬಂದಿರುವೆನು.

ಶಂಬರಾಸುರ—ಬಹಳ ಒಳ್ಳೆಯದು. ಮುಂದುವರೆಯಬಹುದು.
(ವಿದೂಷಕನ ಕಡೆ ನೋಡುವನು)

ವಿದೂಷಕ—ಆರ್ಯೆ ! ನಮ್ಮ ಮಹಾರಾಜನು ತಾನಾಗಿ ದುಃಖಾರ್ತ ರಾದವರು ಎಲ್ಲಿದ್ದರೂ ಹುಡುಕಿ ಅವರನ್ನು ಸಂತೈಸುವ ಖ್ಯಾತಿಯುಳ್ಳವನು. ಇನ್ನು ತಾವಾಗಿ ತನ್ನಲ್ಲಿಗೆ ಬಂದವರ ಬಗ್ಗೆ ಹೇಳಬೇಕಾದದ್ದೇನಿದೆ ? ಮಹಾ ರಾಜನು ನಿನ್ನ ಇಷ್ಟಾರ್ಥ ಪೂರೈಸುವನೆಂದೇ ತಿಳಿ. ಆದರೆ ನಿನ್ನ ಹೆಸರು, ನೀನಾರು, ನಿನ್ನ ಕಷ್ಟವೇನು ಎಂಬುದಾಗಿ ನೀನಾಗಿ ಹೇಳಿಕೊಳ್ಳುವುದೇ ನಿನಗೆ ಒಳ್ಳೆಯದಲ್ಲವೇ ? ಹೆಜ್ಜೆ ಹೆಜ್ಜೆಗೂ ಮಹಾರಾಜರಾಗಲಿ ನಾನಾಗಲಿ ಪ್ರಶ್ನೆ ಹಾಕುವ ಪ್ರಮೇಯವಿಲ್ಲದಿರುವಂತೆ ಒರೆ. ನಿನ್ನಂತೆ ಅನೇಕರು ಮಹಾರಾಜನ ದರ್ಶನಕ್ಕಾಗಿ ಕಾದಿರುವರು. (ಹೇಗಿದೆ ಎಂದು ಸೂಚಿಸುವ ದೃಷ್ಟಿಯನ್ನು ಶಂಬರನ ಕಡೆ ಬೀರುವನು. ಶಂಬರನು ಒಪ್ಪಿಗೆ ಸೂಚಿಸುವನು)

ರತಿ—ಮಹಾರಾಜರಲ್ಲಿ ನನ್ನದೊಂದು ವಿಜ್ಞಾಪನೆ ಇದೆ. ಓ ! ಮಹಾ ರಾಜರ ವೇಳೆಯನ್ನು ನಾನು ಅಪವ್ಯಯಮಾಡಲಾರೆ. ಸಂಕ್ಷೇಪವಾಗಿ ಹೇಳಿ ಬಿಡುತ್ತೇನೆ. ..ನಾನೊಬ್ಬ ಹತಭಾಗ್ಯೆ !

ವಿದೂಷಕ—ಹಾಗೇನು ? ನಿನ್ನ ಭಾಗ್ಯ ನಿನಗೆ ಹಿಂದಿರುಗುವಂತೆ ಮಹಾ ರಾಜನು ಮಾಡುವನು. ನೀನಾರೆಂಬುದನ್ನೂ ಹೇಗೆ ಹತಭಾಗ್ಯೆ ಎಂಬು ವನ್ನೂ ಹೇಳಲೇ ಇಲ್ಲವಲ್ಲಾ ! ವೇಳೆ ಆಗುತ್ತಿದೆ ?

ರತಿ—ನಾನು ಮನ್ಮಥನ ಮಡದಿಯಾಗಿದ್ದ ರತಿ.

ವಿದೂಷಕ—ಆಗಿದ್ದ ಅಂದರೆ ? ಈಗಿಲ್ಲವೇನು ? ನಿನ್ನ ಪತಿಯು ನಿನ್ನ ಕೈ ಬಿಟ್ಟನೇನು ? ಹೇಳು ! ನಿನ್ನಂಥ ರೂಪವತಿಯನ್ನೂ ಗುಣವತಿಯನ್ನೂ ಬಿಟ್ಟು ಹೋದ ಆ ಮನ್ಮಥನೆಲ್ಲಿದ್ದರೂ ಹಿಡಿದು ತರಿಸಿಬಿಡುವನು, ಮಹಾರಾಜನು.

ರತಿ—ಮನ್ಮಥನು ಮುಕ್ಕಣ್ಣನ ತೃತೀಯ ನೇತ್ರವಿನ ಕೋಪಾಗ್ನಿಗೆ ಸಿಕ್ಕಿ ದಗ್ಧನಾದನು. (ಅಳುವ ಸೂಚನೆ ತೋರುವಳು)

ತಂಬರಾಸುರ—ಅಂದರೆ ಭಗವಂತನಾದ ಮಹೇಶ್ವರನ ಕೋಪಕ್ಕೆ ಆಹುತಿ ಯಾಗಿದ್ದಿರಬೇಕು ?

ರತಿ—ಇಲ್ಲ ಮಹಾರಾಜ ! ಜಗನ್ನಿಯಾಮಕನಾದ ಮಹೇಶ್ವರನಿಗೆ ಮಾಹೇಶ್ವರಿಯಲ್ಲಿ ಮನ ನಿಲ್ಲಿಸುವಂತೆ ಮಾಡುವ ಪ್ರಯತ್ನದಲ್ಲಿ ನನ್ನ ಪತಿಯು ಲೋಕಹಿತಾರ್ಥವಾಗಿ ಅಸುವನ್ನು ನೀಗಬೇಕಾಯ್ತು.

ವಿದೂಷಕ—ಆಹಾ ! ಎಂತಹ ಪರೋಪಕಾರಿ ಮನ್ಮಥ ? ಊ ! ಆಮೇಲೇನಾಯಿತು ?

ರತಿ—ಮಾಹೇಶ್ವರಿಗೆ ಪತಿಯ ಸಮಾಗಮವಾಯ್ತು.

ವಿದೂಷಕ—ಆಹಾ ! ಕಷ್ಟ ಕಷ್ಟ ! ಆದರೂ ಉಪಕಾರ ಪಡೆದ ಸತಿಪತಿ ಗಳು ನಿನಗೆ ಪ್ರತ್ಯುಪಕಾರವೆಸಗಲಿಲ್ಲವೆ ?

ರತಿ—ನನ್ನ ವಿಲಾಪ ಕೇಳಿ ಉಮಾಮಹೇಶ್ವರರು ನನ್ನೆಡೆಗೆ ಬಂದು, ನನ್ನನ್ನು ಸಂತೈಸಿ ಹೀಗೆಂದರು :

"ರತಿ ! ನೀನೀಗ ನಿಜವಾದ ಸತಿ ! ನಿನ್ನ ಪತಿಯು ಅರ್ಧಾಂಗಿಯಾಗಿದ್ದ ನೀನೀಗ ಪೂರ್ಣಾಂಗಿಯಾಗಿರುವೆ. ನಿನ್ನ ಪತಿಯು ಈಗ ಅನಂಗನಾಗಿದ್ದರೂ ಸರ್ವ ಜೀವರಾಶಿಗಳಲ್ಲೂ ಪ್ರೇಮವೆಂಬುದರ ಎಚ್ಚರವನ್ನುಂಟುಮಾಡಿರುವನು.

ಈ ಕಾರ್ಯ ನೆರವೇರಿಸಲು ನೀನು ನೆರವಾದೆ. ಲೋಕಕ್ಕೇ ಉಪಕಾರಮಾಡಿರುವ ನೀನೀಗ ಪತಿಯನ್ನು ಕಳೆದುಕೊಂಡ ಪತಿರಹಿತೆಯಲ್ಲ. ನಿತ್ಯಸುಮಂಗಲಿ ನೀನು ನಿನ್ನ ದರ್ಶನ ಮಾತ್ರದಿಂದ ಜೀವರಾಶಿಯಲ್ಲಿ ಪ್ರೇಮವುಕ್ಕುವುದು. ಸಮೀಪದಲ್ಲಿ ಅರಣ್ಯವಿದೆ. ಅಲ್ಲಿಗೆ ತೆರಳಿ ಕಾದಿರು ಶಂಬರಾಸುರ ಮಹಾರಾಜ ಹತ್ತಿರದ ನಗರದಲ್ಲಿದ್ದಾನೆ. ಅವನು ನಿನ್ನ ಪತಿವಿರಹದ ದುಃಖ ಶಮನ ಮಾಡುತ್ತಾನೆ. ಅಲ್ಲಿ ನಿನ್ನ ಪತಿ ಪುನಃ ಬೇರೊಂದು ರೂಪದಲ್ಲಿ ನಿನ್ನನ್ನು ಸೇರುವನು. ಇಹ ಜನ್ಮವನ್ನು ನೀನು ಅನಂತರ ಸುಖದಲ್ಲಿ ನೀಗುವೆ. ತೆರಳು" ಎಂದು.

ಅಂತೆಯೇ ಇಲ್ಲಿಗೆ ಬಂದಿದ್ದೇನೆ. ನನ್ನ ಆಸೆ ಪೂರೈಸುವುದು ಮಹಾರಾಜರ ಕೈಲಿದೆ.

**ವಿದೂಷಕ**—(ಹಾಡು, 'ಭಲರೆ ಭಲರೆ' ಎಂಬಂತೆ.)

**ಭಲರೇ ಭಾಲರೇ ಏ।**
**ನಿನ್ನ ನುಡಿಗೆ ಒಲಿಯುವ ನೀಗಾ।**
**ಈ ಶಂಬರ ಕುಲಪತಿ॥**

(ಶಂಬರಾಸುರನ ಬಳಿಗೆ ಬಂದು ಧ್ವನಿ ಅಡಗಿಸಿ)

ಮಹಾರಾಜ! ರೋಗಿ ಬಯಸಿದ್ದೂ ವೈದ್ಯ ಹೇಳಿದ್ದೂ ಒಂದೇ ಆಯಿತಲ್ಲವೇ ?

**ಶಂಬರಾಸುರ**—ಭದ್ರೆ! ಸರ್ವರ ಇಷ್ಟಾರ್ಥ ಪೂರೈಕೆಯೇ ನನ್ನ ಕರ್ತವ್ಯ. ನಿನ್ನ ಇಷ್ಟಾರ್ಥವೂ ಪೂರೈಸಿದಂತೆಯೇ ತಿಳಿ. ಕೇಳು : (ಎಂದಿನಂತೆ ಶೃತಿ ಸೂಚಿಸಿ ಸಿಂಹಾಸನದಿಂದ ಎದ್ದು ನಿಂತು)

ಹಾಡು : ರಾಗ : ಬೇಗಡೆ ; ತಾಳ ತ್ರಿಪುಟ

**ಆಆ ......ವರೆಯಂತೆ!**
**ಆಆಆ...... ......ತಾವರೆಯಂತೆ!**
**ಆಆ . . ಯಾತಾವರೆಯಂತೆ!**
**ಆಆ .... ..ಳೆಯಾ ತಾವರೆಯಂತೆ!**
**ಆಆ..... ....ಎಳೆಯಾ ತಾವರೆಯಂತೆ!**

ಎಳೆಯಾ ತಾವರೆಯಂತೆ
ಪೊಳೆವ ನಿನ್ನ ಆ ಅ ಅ ಅ ಅ ಆ ಸ್ಯದಾ!
ಚೆಲುವೀಗೆ ಮರುಳಾಆದೆ.... !
ನೀರೇಜನೇತ್ರೇ .......!
ಎಳೆಯಾ ತಾವರೆಯಂತೆ !

(ಹಾಡಿನ ಪ್ರತಿ ಅಕ್ಷರವನ್ನೂ ದೇಹದ ಅಂಗಾಂಗ ಅಭಿನಯದಿಂದ ಮುಗಿಸಿ)

ಭದ್ರೆ! ನನ್ನ ಮನವು ಇಂತಿರುವುದು. ಹೀಗಿರುವಲ್ಲಿ ನಿನ್ನ ಅಭೀಷ್ಟವನ್ನು ಪೂರೈಸುವ ಪ್ರಶ್ನೆಯೇ ಏಳದು ?

ರತಿ—ನಿಜ ಮಹಾರಾಜ! ಅದರೂ ನನ್ನ ಅಭೀಷ್ಟವನ್ನು ಪುನರುಚ್ಚರಿಸಲೇಬೇಕಾಗಿದೆ.

ಶಂಬರಾಸುರ—ಮತ್ತೊಮ್ಮೆ ಉಚ್ಚರಿಸಬೇಕೇ ? ನೂರು ಬಾರಿ ಹೇಳು. ಅದಕ್ಕೇನು ? ನಾನಾಗಲೇ ನಿನ್ನ ಇಷ್ಟ ಪೂರೈಸುವೆನೆಂದು ವಾಗ್ದಾನ ಮಾಡಿದ್ದೇನಲ್ಲಾ ? ಅದನ್ನೂ ನೂರು ಬಾರಿ ಉಚ್ಚರಿಸಲೇ ? ಪರಸ್ಪರ ನಮ್ಮ ಮನವೊಲಿದಿರುವಾಗ ?

ರತಿ—(ಅರ್ಧದಲ್ಲಿ) ಮಹಾರಾಜರು ಕ್ಷಮಿಸಬೇಕು! ನನ್ನ ಮನದಭೀಷ್ಟವು ಮಹಾರಾಜರಿಗೆ ತಿಳಿಯಲೇ ಇಲ್ಲ!

ಶಂಬರಾಸುರ—(ಆತಂಕದಿಂದ) ಹಾಗೆಂದರೆ ? ನನ್ನ ಮನೋಹರೆಯಾಗಿರಬೇಕೆಂದು ನಿನ್ನಿಷ್ಟವಲ್ಲವೆ ?

ರತಿ—ಅದಲ್ಲ ಮಹಾರಾಜ! ನನ್ನ ಮನ ನಟ್ಟಿರುವುದು ದೈವಾಜ್ಞೆಯಾಗಿರುವ ಮತ್ತೊಂದು ರೂಪದಲ್ಲಿ. ಅದು ತಮ್ಮಲ್ಲಿದೆ.

ಶಂಬರಾಸುರ—ಆ ರೂಪ ನಾನಲ್ಲವೆ ? (ಬಿಸುಸುಯ್ಯುವನು)

ರತಿ—ಅಲ್ಲ ಮಹಾರಾಜ! ತಾವು ಬೆಳೆಸಿರುವ ತಮ್ಮ ಪುತ್ರ ಪ್ರದ್ಯುಮ್ನನೇ ಆ ರೂಪ.

ಶಂಬರಾಸುರ—ಅವನನ್ನು ನೀನು ನೋಡಿಯೇ ಇಲ್ಲವಲ್ಲಾ ?

ರತಿ—ನೋಡದಿದ್ದರೂ ನನ್ನಪತಿ ಆ ರೂಪದಲ್ಲಿ ಇರುವನೆಂದು ಉಮಾ ಮಹೇಶ್ವರರ ಆಶ್ವಾಸನೆ !

ಶಂಬರಾಸುರ—ಮತ್ತೆ ಸರ್ವ ಜೀವರಾಶಿಗಳಲ್ಲೂ ನಿನ್ನ ಪತಿ ಹಂಚಿ ಅಡಗಿದ್ದಾನೆಂದೆಯಲ್ಲವೆ ?

ರತಿ—ನಿಜ ಮಹಾರಾಜ ! ಆ ಆ ರತಿಸತಿಯರಿಗೆ ಆ ಆ ಪತಿಯರು ದೇವರಂತೆ. ನನ್ನ ಪತಿ ಅನಂಗನಾದುದು ದಂಪತಿಗಳಾಗಿರುವವರಲ್ಲಿ ನಿಶ್ಚಲಪ್ರೇಮ ಉಕ್ಕಿಸಲಿಕ್ಕಾಗಿ. ಕಂಡ ಕಂಡ ಗಂಡುಗಳು ಕಂಡ ಕಂಡ ಹೆಣ್ಣುಗಳಲ್ಲಿ ಅನುರಕ್ತರಾಗುವುದಕ್ಕಲ್ಲ. ನನ್ನ ಪತಿ ಆ ದೃಷ್ಟಿಯಿಂದ ತಮ್ಮಲ್ಲಿಯೂ ಇದ್ದಾನೆ. ಆದರೆ ಅದು ತಮ್ಮನ್ನು ನಂಬಿ ತನ್ನ ಪ್ರೇಮಮೂರ್ತಿಯೆಂದು ನಿಮ್ಮನ್ನು ಆರಾಧಿಸುತ್ತಿರುವ ನಿಮ್ಮ ಮಹಿಷಿಯಲ್ಲಿ ತಮ್ಮ ಪ್ರೇಮ ನೆಡುವುದಕ್ಕಾಗಿ.

ಶಂಬರಾಸುರ—ಆ ಪ್ರೇಮವಿದ್ದೇ ಇದೆ. ಅದರಿಂದೇನಾಗುವುದು ? ಮಹಾರಾಜನಿಗೆ ಹಲವು ಸತಿಗಳಿರಬಾರದೇನು ?

ರತಿ—ಇರಬಹುದು ಮಹಾರಾಜ ! ಆದರೆ ಪಟ್ಟ ಮಹಿಷಿಯೊಬ್ಬಳೇ ನಿನಗೆ ಯೋಗ್ಯಳಾದ, ಮುಂದೆ ಈ ರಾಜ್ಯವನ್ನು ನಿನ್ನಂತೆಯೇ ಆಳುವ ಕುಮಾರನೊಬ್ಬನನ್ನು ಕೊಡಲು ಯೋಗ್ಯಳು. ಆದ್ದರಿಂದ ನಿನ್ನ ಪ್ರೇಮ ದೃಷ್ಟಿ ಪೂರ್ಣವಾಗಿ ಆಕೆಯ ಮೇಲೆಯೇ ಇರಬೇಕು.

ಶಂಬರಾಸುರ—ಹಾಗಾದರೆ ಉಳಿಕೆಯ ಸತಿಗಳೆಲ್ಲ ?

ರತಿ—ಅವರೆಲ್ಲ ಬಂಗಾರದವರೆನಿಸಿಕೊಳ್ಳುವರು. ಅಂತಹ ಬಂಗಾರದ ವಳು ನಾನಾಗಲೂ ನನ್ನ ಇಷ್ಟವಲ್ಲ ?

ಶಂಬರಾಸುರ—ಹಾಗಾದರೆ ನಿನ್ನಿಷ್ಟವೇನು ?

ರತಿ—ಹೇಳಿದೆನಲ್ಲ ಆಗಲೇ ?

ಶಂಬರಾಸುರ—ನೀನೇ ಏಕೆ ನನ್ನ ಪಟ್ಟಮಹಿಷಿಯಾಗಬಾರದು ?

ರತಿ—ನಿಮ್ಮ ಕೈಹಿಡಿದು ನಿಮ್ಮ ಸಹಧರ್ಮಿಣಿಯಾಗಿರುವ ಹೆಣ್ಣನ್ನು ಪತಿಯ ಪ್ರೇಮದಿಂದ ವಂಚಿತಳಾಗಿಸಲು ಈ ಹೆಣ್ಣಿನ ಮನ ಒಪ್ಪದು.

ಶಂಬರಾಸುರ—ಹಾಗಾದರೇನು ಮಾಡಬೇಕೆನ್ನುವೆ ?

ರತಿ—ನಿಮ್ಮ ಅರಸುತನಕ್ಕೆ ಯೋಗ್ಯವಾದ ಉಚಿತವಾದ ಕರ್ತವ್ಯ ಮಾಡಿ ಮಹಾರಾಜ. ನಿಮ್ಮ ಸತಿ ನಿಮಗಾಗಿ ಹಂಬಲಿಸುತ್ತಿರುವಳು. ಸರ್ವರ ಇಷ್ಟಾರ್ಥ ಪ್ರಾರ್ಥಿಸುವವರು ನೀವು ನಿಮ್ಮ ಪಟ್ಟಮಹಿಷಿಯ ಇಷ್ಟಾರ್ಥ ಪೂರ್ತಿಮಾಡಲಾರಿರಾ ?

ಶಂಬರಾಸುರ—ಅದು ಬಹು ಪ್ರಯಾಸದ ಕೆಲಸವೆಂದೆನಿಸುತ್ತದೆ.

ರತಿ—ಮೊದಲು ಪ್ರಯಾಸದ ಆಯಾಸ ಅನಂತರ ಸುಖ ಪ್ರವಾಸದಾವಾಸ. ಜೀವನವೇ ಹೀಗೆ.

ಶಂಬರಾಸುರ—ಹಾಗಾದರೆ ಇದೇ ನಿನ್ನ ಕೊನೆಯ ಮಾತೇ ?

ರತಿ—ನಾನಿನ್ನೂ ಕೊನೆಯ ಮಾತು ಆಡಿಲ್ಲ.

ಶಂಬರಾಸುರ ಹಾಗಾದರೆ ನಾನಿನ್ನೂ ನಿನ್ನ ಮನವೊಲಿಸಲು ಅವಕಾಶ ಇದೆಯೆನ್ನುವಿಯಾ ?

ರತಿ—ಅವಕಾಶವೇನೋ ಇದೆ. ನೀವು ಪ್ರಯಾಸಪಡಲು ಮಾತ್ರ. ಅದರಿಂದ ನನ್ನ ಮನ ನಿಮ್ಮ ಕಡೆ ತಿರುಗುವುದೆಂದು ನಾನು ಭರವಸೆ ಕೊಡಲಾರೆ,

ಶಂಬರಾಸುರ—ಏನಾ ಅವಕಾಶ ? ಅದನ್ನಾದರೂ ಹೇಳು.
ಅದಕ್ಕೆ ಮೊದಲು ನನ್ನ ಮಾತನ್ನೂ ಸ್ವಲ್ಪ ಕೇಳು (ಶೃತಿ ತೋರಿಸಿ ಹಾಡುವನು)

(ನೀಲಕುಂತಳೆ ಎಂಬಂತೆ ಹಾಡು) ರಾಗ—ತಾಳ—

**ಕಾ... ಮಣೀ (ಮೂರುಸಲ)**
**ಬಾಲಿಕಾಮಣೀ (ಆರುಸಲ)**
**ನೀಲುಕುಂತಳೆ ಲೋಲ ಲೋಚನೆ ಬಾಲಿಕಾಮಣೀ ।**
**ಲಾಲಿಸೆನ್ನ ಪೇಳ್ವಮಾತ ಬಾಲಚಂದ್ರ ಫಾಲೇ ಬಾ—ಲೆ**
**ನೀಲಕುಂತಲೆ— ॥** (ಹಾವಭಾವ ವಿಲಾಸದೊಡನೆ ಹಾಡಿ ಮುಗಿಸಿದಾಗ)

ರತಿ—ಮಹಾರಾಜ ! ನಿನ್ನ ಗಾನವು ಬಹು ಇಂಪಾಗಿದೆ. ಇದನ್ನು ಕೇಳಲೆಂದೇ ನಿನ್ನ ಪಟ್ಟ ಮಹಿಷಿ ಕಾದಿರುವಳು. ಅವಳ ಆಸೆ ಪೂರೈಸುವುದು

ನಿನ್ನ ಕರ್ತವ್ಯವಲ್ಲವೆ? ಪರ ಸ್ತ್ರೀಯಾದ ನನ್ನಲ್ಲಿ ನೀನು ಪ್ರಯಾಸ ಪಡುವುದಕ್ಕಿಂತ ಅದು ಶ್ರೇಷ್ಠಮಾರ್ಗವಲ್ಲವೆ ?

ಶಂಬರಾಸುರ—ಹಾಗೆನ್ನುವೆಯಾ ? ನನಗದು ಹೊಳೆದೇ ಇರಲಿಲ್ಲ! ಆಗಲಿ! ನೀನೆಂದಂತೆ ಪ್ರಯಾಸಪಡುವೆನು. ಆದರೆ ನೀನು ?

ರತಿ—ನಾನೊಂದು ವ್ರತವನ್ನು ಆಚರಿಸಬೇಕೆಂದಿರುವೆನು ಮಹಾರಾಜ!

ಶಂಬರಾಸುರ—ವ್ರತವೆ ?

ರತಿ—ಹೌದು ವ್ರತ

ಶಂಬರಾಸುರ—ವ್ರತವೆಂದೆಯಾ ? ವರ್ತಿಸು. ಎಷ್ಟು ಕಾಲ ?

ರತಿ—ಆರು ಮಾಸಗಳ ಕಾಲ!

ಶಂಬರಾಸುರ—ಕಾರಣ ?

ರತಿ—ಅದು ನಿಮ್ಮ ಸಾಕು ಪುತ್ರ ಪ್ರದ್ಯುಮ್ನನಿಗೆ ನನ್ನ ನಿಜಸ್ವರೂಪ ಗೋಚರವಾಗಲು ಮತ್ತು ಆತನು ಪೂರ್ವಜನ್ಮದಲ್ಲಿ ನನ್ನ ಪತಿಯಾಗಿದ್ದ ನೆಂದು ತಿಳಿವು ಬರಲು.

ಶಂಬರಾಸುರ—ಅದರಲ್ಲಿ ನೀನು ವಿಫಲಳಾದರೆ ?

ರತಿ ಆಗ ತಮ್ಮ ಆಜ್ಞಾನುವರ್ತಿಯಾಗಿ ನಡೆಯುವೆ.

ಶಂಬರಾಸುರ—ಹಾ! ಆದೀಗ ಯೋಗ್ಯವಾದ ಮಾತು. ಸರಿ. ನಿನ್ನಿಷ್ಟದಂತೆ ಏಕಾಂಗಿಯಾಗಿ ವ್ರತವಾಚರಿಸು. ಅರ್ಧ ಸಂವತ್ಸರದವರೆಗೆ ನಾನಿನ್ನ ಗೊಡವೆಗೇ ಬಾರೆನು. ಅನಂತರ ಪರಮೇಶನಿಚ್ಛೆಯಿದ್ದಂತಾಗಲಿ.

ರತಿ—ಕೃತಾರ್ಥಳಾದೆನು. ಎಲ್ಲರೂ ಸೇರಿ ಕಾಮದೇವನನ್ನು ಭಜಿಸುವ

(ಎಲ್ಲರೂ ಹಾಡುವರು)

**ಕಮಲಶರಾ ಸುಮನೆನಿಪಾ ರಮಣ ನಿರಲ್ಕಾ।**
**ಕಾಮನೆನಿಪ ಸೋಮ ಮುಖಿಗೆ ಸುಮರಸದಿಂದಾ।**

(ಎಂಬಲ್ಲಿಗೆ 'ಶಂಬರನ ಶೃಂಗಾರ'ದ ೨ನೆಯ ಅಂಕವಾದ 'ಪ್ರಯಾಸಾಂಕವು' ಮುಗಿದು-ದೊಡ್ಡ ತೆರೆ ಬೀಳುವುದು)

## ಉಪನಾಟಕ — ೨ — ಪಾಟ್ಟ್ಯಗಳಿಗೆ ಪೇಟ್ಟೆ

[ದೊಡ್ಡ ಅಂಕದ ಪರದೆ ಏದ್ದ ಅನಂತರ 'ಬ' ರಂಗದ ಪರದೆ ಏಳುವುದು.]

(ಹಳೇ ಮಾರ್ಕೆಟ್ಟ್ಯ ಸೀನ. ಕಟ್ಟೆಗಳ ಮೇಲೆ ವಿವಿಧ ತರಕಾರಿ, ಸೊಪ್ಪು, ನಿಂಬೆ, ಟೊಮ್ಯಾಟೊ, ಕರಿಬೇವು, ಕೊತ್ತುಂಬರಿ, ಮೆಣಸಿನಕಾಯಿ ಗುಡ್ಡೆಗಳನ್ನಿಟ್ಟುಕೊಂಡು ಎಲೆ ಅಡಿಕೆಯನ್ನು ಪುಷ್ಕಳವಾಗಿ ಅಗಿದು ಮುಂದಿರುವ ಚರಂದಿಗೇ ಬಾಯೆಂಜಲನ್ನು ಪೀಚಿ, ಬಂದ ಹೋದ ಗಿರಾಕಿಗಳನ್ನು ಕೂಗಿ ಕರೆಯುತ್ತ ವ್ಯಾಪಾರ ನಡೆಯುವ ಗುಜಗುಂಪಲು. ಮಧ್ಯದಲ್ಲಿ ಮಹೋದರಿಯೊಬ್ಬಳು, ಅಂಗಡಿಯವಳು, ಪ್ರತಿಷ್ಠಾಪಿತೆಯಾಗಿ ಒಂದು ಕಾಲು ಚಾಚಿ ಕುಳಿತಿದ್ದಾಳೆ. ಅಡಿಕೆಲೆಯ ಕೆಂಪುರಸ ಬಾಯಿಂದ ಬಟ್ಟೆಯ ಮೇಲೆಲ್ಲ ತೊಟ್ಟಿಕ್ಕುತ್ತಿದೆ. ಇತರರೂ ಯಥಾಶಕ್ತಿ. ಪರದೆ ಏಳುವ ಹೊತ್ತಿಗೆ ಎಲ್ಲರೂ ಹಾಡು ಹಾಡಿಕೊಂಡೇ ಸಾಮೂಹಿಕವಾಗಿ ಜನರನ್ನು ಕರೆಯುವರು. ಪಟ್ಟ್ಯಗಳಲ್ಲಿ ' ವರದಾಚಾರೀ ಕಂಪೆನೀದು '' ಧಾಟಿ ಅದೇ. ಮಾತುಗಳು, ಅರ್ಥ, ಈ ಸಂದರ್ಭಕ್ಕೆ ತಕ್ಕಂತೆ)

(ಹಾಡು : ಕಮಲಶರಾ ಎಂಬಂತೆ)

**ದಂಟಿನಸೊಪ್ಪೂ ಕೀರೆಯುಸೊಪ್ಪೂ, ಹರಿವೆಯು ಸೊಪ್ಪೂ ।**
**ಚಪ್ಪರದವರೇಕಾಯೀ ತುಪ್ಪದ ಹೀರೇಕಾಯಿ ಎಳೇ**
**ಬೆಂಡೇಕಾಯೀ ।**
**ಹಾಗಲಕಾಯೀ ಗೋರೀಕಾಯಿ ಹುರುಳೀಕಾಯಿ ॥**
**ದಂಟಿನಸೊಪ್ಪೂ ॥ ಪ ॥**

**ಸೀಮೇಬದನೇಕಾಯಿ ಕೊಡಗಿನ ಕಾಚೀಕಾಯಿ**
**ಬೂದಿಗುಂಬಳಕಾಯೀ ॥ ಹಾಗಲಕಾಯೀ ಹೀರೇಕಾಯಿ**
**ಪಡವಲಕಾಯಿ ಹೇರಳೇಕಾಯಿ** (ಎನ್ನುವ ಹೊತ್ತಿಗೆ) **ದೊಣ್ಣೆ**
**ಮೆಣಸಿನಕಾಯೀ—**

(ಎಂದು ಮಹೋದರಿ ಪೂರ್ತಿಮಾಡುವಳು-ಪುನಃ ಎಲ್ಲರೂ ಇದೇ ರೀತಿ ಹಾಡುವರು)

(ಇನ್ನೊಂದು ಅಂಗಡಿಯುವ)

**ಬನ್ನೀ ರಾಜಾ ಕೊಳ್ಳೀ ರಾಜಾ ತಾಜಾ ಮಾಲುಗ್ಳೂ ।**
**ಉಳ್ಳಾಗೆಡ್ಡೇ ನೀರುಳ್ಳಿ ಗೆಡ್ಡೇ ಕೋಸಿನ ಗೆಡ್ಡೇ ।**
**ಗುಡ್ಡೇಮೆಣಸಿನಕಾಯಿ, ಎಳೇನಿಂಬೇಕಾಯಿ, ಬಲಿತದ್**
**ಬೋರೇಕಾಯೀ ।**

(ಎನ್ನುವನು. ಪುನಃ ಮೊದಲ ಪಂಕ್ತಿ ಎಲ್ಲರ ಬಾಯುಲ್ಲೂ)

(ಗಿರಾಕಿಗಳಿಬ್ಬರ ಪ್ರವೇಶ : ಇಬ್ಬರಿಗೂ ನೆಗಡಿ . ಕರವಸ್ತ್ರಗಳಿಂದ ಮೂಗು ಮುಚ್ಚಿ ಸೀದುತ್ತಾ ಒರೆಸಿಕೊಳ್ಳುತ್ತಾ)

**ಮೊದಲನೆಯವ**—ಏದೋ ಏದೋ, ಏದ್ ದೆಗಡೀದೋ ದದಗೇ ? ಸ್ವಲ್ಪ ದಶ್ಯಕೊಡೋ ಇದ್ದರೆ ?

**ಎರಡನೆಯವ**—ಒಳ್ಳೆ ಗಿರಾಕಿಲೋ ಲೀಲು ? ಲಲಿಗೇ ಇಲ್ಲ ಲಿಲಗೆಲ್ಲಿ ಶರಲೋ ? ಸ್ವಲ್ಪ ತಡೀ ಶರಕಾರೀ ತಕ್ಕೊಲ್‌ಡು ಚಿಲ್ಲರೆ ಬಲ್‌ದರೆ ಅದರಲ್ಲಿ ಕೊಲ್‌ಡಕೊಳ್ಳೋಡಾ ! ತಡೀ ಸ್ವಲ್ಪಾ

೧ನೆಯವ—ಏದು ಪುಯಿಲೋ ಈ ಹೊತ್ತೂ ? ಈ ಅದ್‌ಗಡೀ ಯೋರೆಲ್ಲಾ ಬೇಡಾ, ದುಬಾರಿಯಾಗುತ್ತೆ ! ತಡೀ ! ಇವಳ್ಯಾರೋ ಬಕರಿ ಎತ್ತ್‌ಕೊಂಡ್ ಹೋಗ್ತಿದ್ದಾಳೇ. ಬಕರೀ ಬೇಲೇ ವ್ಯಾಪಾರಾ ಬಾಡಿದ್ರೇ ಸುಲಭ. ಕೂಗು ! ದಿಲ್ಸು.

೨ನೆಯವ—ಸುಬ್ಲೀ ಕೂಗಿದ್ರೆ ಲಿಲ್ತಾರೇಲೋ ಅವರೆಲ್ಲಾ ? ಈ ಶರದಾಚಾರೀ ಲಾಟಕದ ಬಟ್ಟು ಹಾಡೋರೂ ? ಟ್ರೈಬಾಡೋಡ್ಣ ತಡೀ ! ಲಾವೂ ಹಾಗೇ ಹಾಡಿ ಕೂಗೋಡ್ಣ !

(ಹಾಡು : 'ಪೋಗುವೆ ಎಲ್ಲಿಗೆ, ನಾಗವೇಣೀ ಬಿಗೆ' ಎಂಬಂತೆ)

ಪೋಗುವೆ ಎಲ್ಲಿಗೆ ।
ಲಾಗವೇಲ್ಲೀ ಬಿಗೆ ॥
ಪೋಗುವೇ ಎಲ್ಲಿಗೇ .
ಲಾಗವೇಲ್ಲೀ ಬಿಗೇ ॥
ಪೋಗುವೇ ಎಲ್ಲಿಗೆ ? ॥
ಭಾರವ ಪೋತ್ತಿಹೇ
ಇಳಿಸದೆ ಲಡೆದಿಹೇ ।
ಈಪರಿ ಯಾದರೇ ।
ದಾರಿಯುದೆಲ್ಲಿದೇ ॥
ಪೋಗುವೇ ಎಲ್ಲಿಗೇ ॥

ಎಲೌ ! ಲಲಲಾಬಣೇ ! ಭಾರವಾಗಿರುವ ಬಕ್ಕರಿಯುಲ್ಲು ಇಳಿಸಿ ಬದಲೇ ಕಾಯಿಯುಲ್ಲು ಲಬಗೆ ಕೊಡುವಲ್ಲಾಥವಳಾಗು.

**ಮಕ್ಕರಿಯಾಕೆ**— ಲೇ ! ಅಪ್ಪಿ ! ಯಾರದು ಬದನೇಕಾಯಿ ಗಿದನೇ ಕಾಯೀಂದೀಯ. ಮುಳ್ಳುಗಾಯಿ ಇದು.

ತಿನೆಯುವ ಏಲಾಪೂ ಇಲ್ಲೆ. ಈ ಊರ್‍ಲ್ಲಿ ಬದಲೇಕಾಯ್‌ ಲಾವಲ್ಲೋದು. ಇಳಿಸು ಹೋಗ್ಲಿ, ಲಿಲ್ಲ ಬುಳ್ಳುಗಾಯಿ !

(ಅವಳು ಇಳಿಸಲು)

ಹೇಗೆ ಇದೂ ? ಗುಡ್ಡೇಲೋ ತೂಕದಲ್ಲೋ ?

**ಮಕ್ಕರಿಯಾಕೆ**— ಇಳಿಸಾಕೆ ಮುಂದೇನೇ ಕೇಳಬಾರದಾ ಎಂಗೇಂತ ? ಏನ್ ಆಳ್ ಗಂಡಸ್ರೋ ?

**ಅಯ್ಯರ್**— (ಪ್ರವೇಶಿಸಿ) Brother ! ಮೆದುವಾ ಪೇಶುಣಂ ಅವರೊಡೆ. ಹಂಗೆಲ್ಲಾ ರೂಡ್ (Rude) ಆಕಿ ಪೇಶಿತರೆ ಅದು ಸರಿ ಓಗ್ಗುದಾ ? ಜೆಂಟಲ್‌ಮೇನ್ ಆಕಿ ಸ್ವಲ್ಪ ನಯಮಾಕಿ ಕೇಳವೇಕು ಸ್ವಾಮೀ. ಇವಾ ಎಲ್ಲಾ ರಾಗ ಪ್ರಿಯರ್. ಪದಾ ಆ—ಪದಾ ಆಟ್ರೀ.

**ಮಕ್ಕರಿಯಾಕೆ**—ಏನಯ್ಯೋ ! ಪದ ಆಡೊದಂತೆ ಪದಾ ! ಅಂಗಂದ್ರೇನ್. ಗೊತ್ತೈತಾ ನಿಂಗೇ ? ಪದಾ ಆಡೋದೂ ಅಂದ್ರೆ ಜೀವ ಒಗ್ಯೋದೂ ಅಂತ ! ಅಂಗನ್‌ಬ್ಯಾಡಾ. ಆಡು ಆಡು ಅನ್ನು.

**ಅಯ್ಯರ್**—ಸ್ಸರೀ ಅವ್ವಾ ! ನಾನೇ ಆಟಲಾ ? ಕೇಳು ಅಂಗಾರೆ

(ಇಂದುವದನೆ ಕುಂದರದನೆ—ಎಂಬಂತೆ ಹಾಡು.)

**ಇಂದು ಬದನೆ ಕಾಯಿಯ ಬೆಲೇ**
**ಒಂದೇ ಮಾತೊಳ್ ಪೇಳ್ ।**
**ಇಂದು ಬದನೆ ಕಾಯಿ..**
**ಯಾ ಬೆಲೇ ಒಂದೇ....**
**ಮಾ ತೋಳ್ ..ಪೇಳ್ ॥**

ಕೋಪಮಾಟಿಕೋ ಬೇಡ ಸಿಸ್ಟರ್ ! ಸಿಸ್ಟರ್ ಅನ್ನ ಸಉದರಿ ಅಲ್ಲೆ— ಸಿಸ್ಟರ್ ಅನ್ನ ನಂಬುಳೊಡೆ ಪೊರಂದವಾ—ಇಂದ ಬೂಮೀಲೇ ಪೊರಂದವಾ— ಅನ್ನಾ—ವಂದೇ ಮಾತರಂ ಮಕ್ಕಳೂನ್ ಪೇರು—ಅತಕ್ಕೆ ಇಂಗ್ಲೀಷ್‌ಲೇ ಸಿಸ್ಟರೂಂಗ್ರಾ—ಆ ಚಾ— ?

**ಮುಕ್ಕರಿಯಾಕೆ**—ಅಂಗೇ ಆಗ್ಲಿ ನನ್ನೊಡೆಯಾ. ಈ ಮುಳ್ಳುಗಾಯಿ ಎಂಟಾಣೆ ವೀಸೆ. ತಕ್ಕಂಡೀಯಾ ಇಲ್ವಾ, ಯೋಳು.

**ಅಯ್ಯರ್**—ಆಹಟ್ಟುಂ ಅಪ್ಪಡಿಯೇ ಆಹಟ್ಟುಂ. ಆನಾಲ್ ನಲ್ಲದಿ ಕುಡುಮ್ಮಾ. (ಮುಂದೆ ಹಾಡುತ್ತಾ)

ಕಳಿತ ಕೊಳೆತ ಹುಳಿತ
ಕಾಯ್ಗಳಾ ಕೊಳಲುಲಾರ್ರೇನೇ ॥
ಕಾಳೀತ ಕೋಳೇತ ಹೂಳೀತ
ಕಾಯ್ಗಳಾ ಕೊಳಲು ಲಾರ್ರೇನೇ ॥
ಈಂದು ಬಾದನೆಕಾಯಿಯಾ
ಬೆಲೇ ವಂದೇ ಮಾತೋಳ್ ಪೇಳ್ ॥

**ಮುಕ್ಕರಿಯಾಕೆ**—ಯೋಯ್ ! ಈ ಕಣಿವೇ ಕೆಳಗ್ನೋರೆಲ್ಲಾ ಇಂಗೇವೇ ! ಇಂಗೇವೇಯ. ಬರೇ ಮಾತು ! ಕಾಯಿಗೀಯಿ ಕೊಳತಿಲ್ಲಾ ಕಳಿತಿಲ್ಲಾ, ತಕ್ಕೊಣ್ಣೋ ಅಂಗಿದ್ರೇ ತಕ್ಕೋ. ಶೆಂದಾಕಿರೋ ಕಾಯಿನ ಅಂಗೆಲ್ಲಾ ಅನ್ನೋಕೋಗ್ಬ್ಯಾಡಾ ಬೇಕಾ ಬೇಡ್ವಾ? ಲೇ ! ಎತ್ನೋಲೇ ಮುಕರೀಯಾ. ವೊತ್ತಾಯ್ತು ! ಅಲ್ಲೇ ಒಂದು ಅಂಗಡೀಗಾರ ಆಕುವಾ. (ಸುಳಿದಾಡುತ್ತಿದ್ದ ಒಬ್ಬನ ಕೈಲಿ ಮುಕ್ಕರಿ ಎತ್ತಿಸಿಕೊಂಡು ಹೊರಡಲನುವಾಗಲು)

**ವಿನೆಯುವ**--ಇರವ್ವಾ ಸ್ವಲ್ಪಾ ! ಅವಸರಾ ಬೇಡಾ ! ಅವರು ಅಯ್ಯರು. ಅವರಲ್‌ದಿದ್ರೆ ಲಾವಿಲ್ವಾ. ಲಾವೇ ತಕ್ಕೊಳ್ಳೋರೂ. ಇಳಿಸೂ.

**ಮುಕ್ಕರಿಯಾಕೆ**—ಬಿಡ್ರೀ ಬಿಡ್ರೀ ಯಾಸಟ್ಟಿಗೋ. ಎತ್ನೋದೂ ಇಳಿಸೋದೂ ಇದೇ ಕೆಲಸ. ನಾನೇನಿಲ್ಲಂಗ್ಡೀ ಇಟ್ಟೆವ್ನಾ— ಅಕ್ಕೋ ಅವಳಂಗೇ ! (ಮುಹೊದರೀ ಕಡೆ ನೋಡುವಳು) ಇದ್ ಮಾರೀ ಇನ್ನು ಮೂರು ಮೈಲೀ ನಡೀಬೇಕ್ ನಮ್ಮ್ ಅಟ್ಟೀಗೆ.

**ಮುಹೋದರಿ**—(ಬಾಯಲ್ಲಿದ್ದ ಅಡಿಕೆಲೆ ಉಗುಳನ್ನು ಇವರೆಲ್ಲ ನಿಂತಿದ್ದ ಕಡೆ ಪೀಚಿ) ಲೇ ! ಎಳೇ ನಿಂಬೇಕಾಯೀ ಯಾರ್ನೇ ಮಾರೀ ಗೀರೀಂದೀಯಾ? ಚಿಗತ್

ಕೊಂಡೇ ಜೋಟುದ್ದಾ ಇದ್ದೋಳೂ. ನೀನೂ ಒಂದು ಅಂಗಡಿ ಆಕ್ಕೊಂಡು ಕುನ್ತಕೋ ಇಲ್ಲೀ? ಇಲ್ಲದಿದ್ರೆ ಓಗು ಅತ್ಲಾಗೇ? ನನ್ನಂಗಡೀ ಗಿರಾಕೀನ ಎಳ್ಕೊಂಡ್ ಓಗ್ತಿದ್ದೀಯಾ! ಓಗೇಲೇ! ಇಲ್ಲದಿದ್ರೆ ಈ ಕುಂಬಳಕಾಯಿ ಎತ್ತಾಕ್ದಂಗೆ ಎತ್ತಿ ಒಗದ್ಬಿಟ್ಟೇನು ಉಷಾರೂ! ಓಗೇ!

**ಅಯ್ಯರ್**—ಏ! ಸಿಸ್ಟರ್, ಸೋದರಿಯಾ ಮಹೋದರಿಯಾ ಉಂಗ ವೇರೂ? ನಂಬ ನಂಬ ಮಾತಿಕಳಕು ನೀನ್ಯಾಕೆ ಮೂಗಿಡ್ತೀಯಾ ಅಂತ?

**ಮಹೋದರಿ**—ಲೇ ಅಯ್ಯರೀ! ಮುಚ್ಕೋ ಕಂಡಿಪ್ಪೀ. ಏನೋ ಜದಾ ಆಡ್ತಾನೆ ಆಟೊತ್ನಿಂದ. ಕೈ ಮೈ ಆಡಿಸ್ಕಂಡು! ಕೊಂಗನಂಗೆ.

**ಅಯ್ಯರ್ ಮಿತ್ರ**—(ಹಾಡು: ಸ್ವೈತಿರು ಮೋಹಾಕರೆ ಎಂಬಂತೆ)

ಸಾಕದು ಸುಂಸುಂಕಿರೇ! ಸಿಸ್ಟರ್!
ಕೊಂಗಾಕುಲವ ಬಹಿರಂಗಾ
ಪಡಿಸಲಹುದೇ!
ಸಾಕ್ ಸಾಕದು ಸುಂಸುಂಕಿರ್ರೇ॥

**ಮಹೋದರಿ**—ಓ ಓ! ಇವ್ನೊಬ್ಬ ಬಂದ್ನೋ ಅಬ್ಬೇಪಾರೀ! ನಿಂಗಲ್ಲ ನಾನೇಳಿದ್ದು ಇವನಿಗೆ, ಈ ಅಯ್ಯರೀಗೆ—ಅವನೇನೇಳ್ತಾನೆ ಕೇಳೋವಾ! ನೀನ್ಯಾಕಾ ಬಾಯಿ ಬಿಡಾದು?

**ಅಯ್ಯರ್**—ನಾನೇ ಪೇಶರೆ-ಕೇಳು (ಹಾಡುವನು)

("ಸಾಕು ಸಾಕು, ನಿನ್ನ ಮಾತೂ"—ಎಂಬಂತೆ)

ಸಾಯಿಕು ಸಾಯಿಕೂ ನಿನ್ನ ಮಾಯಿತೂ
ಚುಮ್ಮ ಇರಲೂ ಮನವು ಬರದೂ?
ಸಾಯಿಕು ಸಾಯಿಕು ॥

**ಮಕ್ಕರಿಯಾಕೆ**—(ಇವರ ಜಗಳವಾದದ್ದು ನೋಡಿ ಮಕ್ಕರಿ ಎತ್ತಿಕೊಂಡು ಹೊರಟದ್ದು ನೋಡಿ)

ವಿನೆಯುವ— ಲೇ ಅಪ್ಪಾ ! ಲಿಲ್ಲು ಲಿಲ್ಲು ! (ಹಾಡು : ನಿಲ್ಲು ನಿಲ್ಲು ಎಂಬಂತೆ)

ಲಿಲ್ಲು ಲಿಲ್ಲೊ ಎಲ್ಲಿ ಪೋಲ್ವೇ
ಸುಲ್ಬರಾಲ್ಗೀಯೋ ॥
ಲಿಲ್ಲು ಲೀಲ್ಲು ಎಲ್ಲೂ ಪೋಗದೇ
ಕೊಳಲು ಲಾಲು ಇಲ್ಲಿಹೇ ॥
ಲೀಲ್ಲು ಲೀಲ್ಲು ಏಲ್ಲಿ
ಪೋಲ್ವೆ ! ಸು ಲ್ಬಾ ರಾ ಲ್ಗೀ—ಯೋ !'

( ಮಕ್ಕರಿಯಾಕೆ ನಿಲ್ಲುವಳು ಮಹೋದರಿಗೆ ತನ್ನ ಗಿರಾಕಿಗಳು ಪುನಃ ಇವಳ ಹತ್ತಿರ ಹೋದರಲ್ಲಾ ಎಂದು ಕೋಪ)

ಮಹೋದರಿ—ಲೇ ! ತಿರ್ಗೀ ನಿಂತ್ಕೊಂಡಾ ಇಲ್ಲೇವಾ ? ನನ್ನ ಗಿರಾಕಿ ಕಿತ್ಕೊಳ್ಳಾಕೇ ? ಬಾಪೆ ತಡೀ ! ಇಕ್ಕತೀನಿ ಈವತ್ನಿಂಗೆ ಇಂಗೂ. ತಿರ್ಗೀ ಸುಳಿದಾಡಬಾರ್ದು ಈ ಕಡೇ ಅಂಗೆ !

ಅಯ್ಯರು—ಮಿತ್ರರೂ—ಎಲ್ಲರೂ

(ಹಾಡು : ಲೋ ಖೂಳನೆ ದುರಾತ್ಮನೆ ಎಂಬಂತೆ)

ಲೇ ಖೂಳಳೇ ದುರಾತ್ಮಳೇ
ಕಠೋರ ನೀಚ ಹೇಡಿಯೋ !
ವಿನೀತಭಾವವನ್ನು ತೋರಿ
ಮೋಸಗ್ಯೆಯ್ಯುತ್ತೀರ್ಪೆಯಾ ॥

ಯಾರ್ರೀ ಅಲ್ಲೀ ? ಪೋಲೀಸ್ ! ಪೋಲೀಸ್ ! (ಕೂಗುವರು)

(ಮಾರ್ಕೆಟ್ಟಿನ ಕಾವಲು ಇನ್‌ಸ್ಪೆಕ್ಟರು ಲಟ್ಠಾ ಹಿಡಿದು ಪ್ರವೇಶಿಸುವನು.)

ಏಸ್ರಿ ಇದೂ ! ಏನಮ್ಮಾ... ಸೈರಿಸಿಕೋ ಸ್ವಲ್ಪ, ಅಂಗಾರಾಗಬೇಡಮ್ಮಾ. ಇದೇನು ತರಕಾರೀ ಮಾರ್ಕೆಟ್ಟೋ ಮೀನು (mean) ಮಾರ್ಕೆಟ್ಟೋ ಹೀಗೆ ಕಾದಾಡೋಕೆ ? ಶಾಂತೀ—ಶಾಂತೀ ಶಾಂತೀ !

ಹಾಡು—(ಸಾಮರಾಗ)

ಶಾಂತಮು ಲೇಕಾ ಸೌಖ್ಯಮು ಲೇದೂ !
ಸಾರಸ ಸುಮುವದನ ॥

ಎಲೌ ! ಸುಮುವದನೆ ! ಶಾಂತಿಯಿಲ್ಲದೇ ಸೌಖ್ಯವಿಲ್ಲಮ್ಮಾ. ಮಿತ್ರರೇ ! ಶಾಂತಿ ಇಲ್ಲದೇ ನಿಮಗೆಲ್ಲ ಸೌಖ್ಯವೆಲ್ಲಿ ಬಂತು ?

**ದಾರಸುತಾ ಧನಧಾನ್ಯ ಮೂಲುಂಡಿನಾ ।**
**ಬಾಗುಗಾ ಸಕಲ ಹೃದ್ಭಾವಮೂ ದೆಲಿಶೀನಾ ॥**
**ಶಾಂತಮು ಲೇಕಾ.... ॥**

(ಕಂದಕ್ಕೆ ಬದಲಾಯಿಸಿ)

**ಅಮ್ಮಗಳಿರಾ । ಅಕ್ಕಗಳಿರಾ ।**
**ಮುಂದೆ ಬಂದರೆ ಹಾಯಬೇಡಿ**
**ಹಿಂದೆ ಬಂದರೆ ಒದೆಯಬೇಡಿ**
**ಕಂದ ನಿಮ್ಮವಳೆಂದು ಕಾಣಿರಿ**
**ತಬ್ಬಲಿಯು ನೀ ಕರುವನೂ ॥**

ಎಂಬ ಗೋವಿನ ಕತೆ ಹಾಡನ್ನು ಕೇಳಿಲ್ಲವೇ ? ಪಾಪ ! ಈ ಮಕ್ಕರಿ ಹೊತ್ತಮ್ಮ ನಿನ್ನಮುಂದೆ ಒಂದು ಎಳೆಗರು. ಅದರ ಮೇಲೇಕಮ್ಮ ನಿನ್ನ ಕೋಪ ? ಶಾಂತಳಾಗು, ಶಾಂತಳಾಗು ಒಬ್ಬರಿಗೊಬ್ಬರು ಅರ್ಥಮಾಡಿ ಕೊಂಡೂ ತರಕಾರಿ ಕೊಂಡುಕೊಂಡೂ ಸೌಖ್ಯವಾಗಿ ಮನೇಗೆ ಹೋಗಿ.

ಹಾಗೆ ಸೌಖ್ಯವಾಗಿ ಮನೇಗೆ ಹೋಗಬೇಕಾದರೆ ಶಾಂತಿ ಇಲ್ಲದಿದ್ದರೆ ಹೇಗೆ ಸಾಧ್ಯ ಹೇಳಿ ಎಲ್ಲರೂ ... (ಎಲ್ಲರೂ ಹೇಳುವರು)

**ಶಾಂತಮು ಲೇಕ । ಸೌಖ್ಯಮು ಲೇದೂ ॥**

(ಎಂಬಲ್ಲಿಗೆ 'ಶಂಬರನ ಶೃಂಗಾರ'ದ ಐದನೆಯ ಅಂಕದಾನಂತರದ ಉಪನಾಟಕವಾದ 'ಮಟ್ಟುಗಳಿಗೆ ಪಟ್ಟ'ದ ಮೊದಲ ಚೂರು ಮುಗಿದು ಅಂಕದ ಪರದೆ ಬೀಳುವುದು. ಎರಡನೆಯ ಚೂರಿನ ತುಣುಕು ಮಾತ್ರ ಸಂಪಾದಕನ ನುಡಿಯಲ್ಲಿ ಕೊನೆಯ ಪುಟಗಳಲ್ಲಿದೆ. ಅದನ್ನು ಪೂರ್ಣಮಾಡಿದಾಗ ಈ ಉಪನಾಟಕದ ಮುಕ್ತಾಯ)

# ಅಂಕ ೩ ಪ್ರವಾಸ

(ಉಪನಾಟಕ ಮುಗಿದಾಗ ಬಿದ್ದಿದ್ದ ದೊಡ್ಡ ಅಂಕದ ಪರದೆ ಎದ್ದು ಶಂಬರಾಸುರನ ಅರಮನೆಯ ರಾಣೀವಾಸದ ಹಜಾರ ಎದ್ದು ಕಾಣುವುದು. ಎದುರಿಗೆ ರಾಣಿಯ ಪೂಜಾ ಗೃಹದ ಬಾಗಿಲು ಎರಡೂಕಡೆ ದೊಡ್ಡ ತೈಲ ಪ್ರದೀಪಗಳು, ಧೂಪಧೂಮಗಳು, ಮೂರು ಸಿಂಹಾಸನಗಳು ; ಮುಂದುಗಡೆ ಎರಡು, ಹಿಂದೆ ಒಂದು. ಪೂಜಾಗೃಹದಲ್ಲಿ ವಾದ್ಯಗಳ ಜೊತೆಗೆ ಎರಡು ಹೆಣ್ಣುಕಂಠಗಳು ಸೇರಿ ಹಾಡುತ್ತಿರುವುದು ಕೇಳುವುದು.)

(ಹಾಡು—ಹಳಯ ಕಂದಾಚಾರದ ಧಾಟಿಯಲ್ಲಿ)

**ನಂಬಿದವರ ವ್ಯಸನಗಳನು**
**ಇಂಬಿನಿಂ ಪರಿಹರಿಸು ನೀ ಇಇಇ ।**
**ದಿತಿ ಕುಲದ ದೇವಿಯೇ ನೀ**
**ಕ್ಷಿತಿಯೊಳಿಂತವತರಿಸೀ ಇಇಇ ॥**
**ಮತಿವಿಹೀನರಿಗಾದೆ ಗತಿ ನೀ ಎ**
**ನ್ನಂಬೆ ಕರುಣಾಕರೀ ಇಇಇ ॥**
**ದಿತಿ ಕುಲದ ದೇವಿಯೇ ನೀ......॥**

(ಅನಂತರ ಮಂಗಳವಾದ್ಯಗಳ ಶಬ್ದ)

**ವಿದೂಷಕ**——(ಪ್ರವೇಶಿಸಿ) ಆಹಾ ! ಇದೀಗ ಸುಖಜೀವನ ! ಈ ಆರು ಮಾಸಗಳಿಂದ ರತಿ ದೇವಿ. ನಮ್ಮ ಮಹಾರಾಣಿ ಇವರಿಬ್ಬರೂ ಅವರವರ ಪತಿಗಳನ್ನೊಲಿಸಿಕೊಳ್ಳಲು ಪೂಜೆಗಳಲ್ಲಿ ನಿರತರಾಗಿ ವ್ರತಿಗಳಾಗಿರುವಲ್ಲಿ ಪ್ರತಿದಿನ ಹಗಲು ರಾತ್ರೆ ನನಗೆ ಪ್ರಸಾದರೂಪದ ಮೃಷ್ಟಾನ್ನಭೋಜನ, ಆರಾಮ ಜೀವನ ! ನನಗೇನೋ ಒಳ್ಳೆಯದೇ. ಆದರೆ ಮಹಾರಾಜನೂ ಪ್ರದ್ಯುಮ್ನನೂ ಕೊರಗಿ ಸೊರಗುತ್ತಿರುವರು. ವ್ರತವೆಂದು ಮುಗಿದೀತೋ, ಎಂದು ಕೈ ಹಿಡಿವ ಹೆಣ್ಣಿನ ಸಂದರ್ಶನವಾದೀತೋ ಎಂದು ಹಾತೊರೆಯುತ್ತಿರುವರು. ಈರ್ವರೂ ಅವರವರ ಪ್ರೇಮ ಪುತ್ಥಳಿಗಳನ್ನು ಚಿತ್ರಿಸಿಕೊಂಡು ತಾತ್ಕಾಲಿಕವಾಗಿ ಆನಂದ

ಹೊಂದುತ್ತಿರುವುದು ಅವರ ವಿರಹತಾಪವನ್ನು ಇನ್ನೂ ಹರಿತವಾಗಿಸುತ್ತಿದೆ ಆ ದೃಷ್ಟಿಯಿಂದ ನಾನೂ ನನ್ನ ಸುಖವನ್ನು ಇತರರ ಸುಖಕ್ಕಾಗಿ ಬಲಿಕೊಡ ಬೇಕಾಗಿದೆಯಲ್ಲ ? ಇರಲಿ. ಆದರೆ ಸಂತೋಷದ ಸುದ್ದಿಯೆಂದರೆ, ಮಹಾ ರಾಜನ ಮನಸ್ಸು ಮಹಾರಾಣಿಯ ಕಡೆ ಹೆಚ್ಚು ವಾಲುತ್ತಿರುವುದೇ ಆಗಿದೆ. ಇಗೋ ! ಮಹಾರಾಜರೂ ಪ್ರದ್ಯುಮ್ನ ರಾಜಕುಮಾರರೂ ಇಲ್ಲಿಗೇ ಬಿಜಯ ಮಾಡುತ್ತಿದ್ದಾರಾಗಿ ವ್ರತ ಮುಗಿವ ಕಾಲ ಸನ್ನಿಹಿತವಾಗಿದೆಯೆನ್ನಬಹುದು. ವಿಜಯವಾಗಲಿ ಮಹಾರಾಜರಿಗೆ ! ವಿಜಯವಾಗಲಿ ಪ್ರದ್ಯುಮ್ನ ಕುಮಾರನಿಗೆ. ಇದೇ ತಾನೇ ಮಂಗಳಾರತಿ ಮುಗಿದಂತಿದೆ

ಶಂಬರಾಸುರ—ಕೃತಾರ್ಥರಾದೆವು. ದೇವಿಯು ಹೇಗಿರುವಳು.

ವಿದೂಷಕ—ನಿಮ್ಮ ಆಗಮನವನ್ನೇ ನಿರೀಕ್ಷಿಸುತ್ತ ನಿಮಗಾಗಿ ಹಂಬಲಿ ಸುತ್ತಿರುವಳು ಮಹಾರಾಜ !

ಶಂಬರಾಸುರ—ಧನ್ಯನಾದೆನು. ಕುಮಾರ ಪ್ರದ್ಯುಮ್ನನ ಮನಸ್ಸಿನಲ್ಲೂ ಅದೇ ರೀತಿ ಇರಬಹುದಲ್ಲವೆ ?

**ಪ್ರದ್ಯುಮ್ನ—ತಾವು ಅಪ್ಪಣೆ ಕೊಡಿಸಿದಂತೆಯೇ ಇದೆ ನನ್ನ ತಂದೆಯೆ.**

[ಮಂಗಳವಾದ್ಯಗಳ ಸಮೇತ ಮಹಾರಾಣಿ ರತಿದೇವಿಯರು ಪೂಜಾಗೃಹದಿಂದ ಹೊರಗೆ ಬರುವರು. ಅವರ ಕಣ್ಣುಗಳು ವಸ್ತ್ರಾಚ್ಛಾದಿತವಾಗಿರುವವು.

ಹಜಾರದ ಮಧ್ಯೆ ಅವರು ನಿಲ್ಲುವರು. ವಿದೂಷಕನು ಮಹಾರಾಜ ಮತ್ತು ಪ್ರದ್ಯು ಮ್ನನಿಗೂ ಕಣ್ಣುಗಳನ್ನು ವಸ್ತ್ರದಿಂದ ಬಿಗಿದು ಇಬ್ಬರನ್ನೂ ತಾನೇ ಕೊಂಡೊಯ್ದು ಪೂಜಾಗೃಹಕ್ಕೆ ಬಿಟ್ಟು ಬರುವನು ಅಲ್ಲಿ ದೇವ ದೇವನಿಗೆ ನಮಿಸಿದೊಡನೆ ಇಬ್ಬರನ್ನೂ ವಾಪಸು ಕರೆತಂದು ಮೂರು ಸಿಂಹಾಸನಗಳನ್ನೂ ಒಂದು ಕಡೆ ಹಾಕಿಸಿ ಅದರ ಮೇಲೆ ಅವರನ್ನು ಕುಳ್ಳಿರಿಸಿ ತಾನೂ ಕೂರುವನು. ಅನಂತರ ಚೇಟಿಯರಿಗೆ ಹೇಳಿ ಸತಿಯರಿಬ್ಬರನ್ನೂ ಕರೆ ತಂದು ಇವರ ಮುಂದೆ ನಿಲ್ಲಿಸಬೇಕೆಂದೂ ಸಂಜ್ಞೆ ಮಾಡುವನು

ಹಿಮ್ಮೇಳನದ ಸಂಗೀತ ಪೂಜಾಗೃಹದಿಂದ ಕೇಳುವುದು. ಮುಕ್ತಾಯದ ಹೊತ್ತು ಬಂದಾಗ ಇವರ ಸುತ್ತು ಪ್ರದಕ್ಷಿಣೆ ಮಾಡುತ್ತಿದ್ದ ಮಹಾರಾಣಿಯು ಶಂಬರಾಸುರನಿಗೂ, ರತಿಯು ಪ್ರದ್ಯುಮ್ನನಿಗೂ ತಮ್ಮ ಕೈಲಿದ್ದ ಮಾಲೆ ಹಾಕಿ ಅವರ ಕೈಹಿಡಿದುಕೊಂಡು ನಿಲ್ಲು

ವರು. ಕಣ್ಣು ಕಟ್ಟುಗಳನ್ನು ಬಿಚ್ಚಿದೊಡನೆ ಎಲ್ಲರಿಗೂ ಆಶ್ಚರ್ಯವಾಗುವುದು. ಸತಿಯರು ಪತಿಯರಿಗೆ ನಮಿಸುವರು.]

ಶಂಬರಾಸುರ -ಆಹಾ! ದೈವಲೀಲೆ ಎಂತಹ ಅದ್ಭುತವಾದುದು? ಯಾರು ಯಾರಿಗೆ ತಕ್ಕವರೋ ಅವರು ಅಂಧರಾಗಿದ್ದರೂ ಅವರವರು ಅವರವರನ್ನು ಮುಚ್ಚಿದ ಕಣ್ಣಲ್ಲಿಯೇ ಪ್ರೇಮದಿಂದ ಸೇರುವಂತೆ ಮಾಡು ವುದಲ್ಲಾ, ಇದೇ ಸತ್ಯ ಸ್ವರೂಪದ ಸಾಕ್ಷಾತ್ಕಾರ. ಮಹಾರಾಣಿಯೇ! ಈ ಸಮಯದಲ್ಲಿ ನಿನ್ನ ಕೋರಿಕೆಯೇನು?

ಮಹಾರಾಣಿ- ಆರ್ಯಪುತ್ರಾ! ಈ ರಾಜ್ಯ ವೈಭವದ ಸುಖವಿನ್ನು ಸಾಕು. ಅರಣ್ಯವಾಸ ಪ್ರವಾಸಿಗಳಾಗಿ ತಪಸ್ಸಿನಿಂದ ಜಗತ್ಕಲ್ಯಾಣ ಸಾಧಿಸಲು ತಾವೂ ಇಷ್ಟಪಡುವುದಾದರೆ ನಾನು ಕೃತಾರ್ಥಳು.

ಶಂಬರಾಸುರ—ದೇವಿಯು ನುಡಿದಂತಾಗಲಿ. ಈ ರಾಜ್ಯವನ್ನು ಕುಮಾರ ಪ್ರದ್ಯುಮ್ನನ ಕೈಲಿಟ್ಟು ಪ್ರಜೆಗಳ ಯೋಗಕ್ಷೇಮವನ್ನು ಇತೋಪ್ಯತಿಶಯ ವಾಗಿ ಕಾಪಾಡೆಂದು ಹೇಳಿ ಪ್ರವಾಸಕ್ಕೆ ತೆರಳೋಣವೇ?

ಮಹಾರಾಣಿ—ನನ್ನ ಮನಸ್ಸಿನಲ್ಲಿದ್ದುದನ್ನೇ ಅಪ್ಪಣೆ ಕೊಡಿಸಿದಿರಿ ನಾಥಾ!

ಶಂಬರಾಸುರ—ಅನಾಥೆಯಾಗಿ ನನ್ನ ಮರೆಹೊಕ್ಕಿದ್ದ ರತಿದೇವಿ ಈಗ ಸನಾಥೆಯಾದಳು. ತನ್ನ ಸುಖವನ್ನೇ ಎಲ್ಲರಿಗೂ ಹಂಚಿಕೊಟ್ಟಳು. ಧನ್ಯೆ ನೀ ರತಿದೇವಿ! ಇನ್ನು ಕುಲಪುರೋಹಿತರನ್ನು ಕರೆಸಿ ರತಿ ಪ್ರದ್ಯುಮ್ನರಿಗೆ ಶಾಸ್ತ್ರೋಕ್ತ ವಿವಾಹವೆಸಗಿ ರಾಜ್ಯ ಪಟ್ಟಾಭಿಷೇಕವನ್ನೂ ಕಟ್ಟಿ ನಾವೂ ತಪೋವನ ಪ್ರವಾಸ ಕೈಗೊಳ್ಳಬಹುದಲ್ಲವೇ ಮಹಾರಾಣಿ?

ಮಹಾರಾಣಿ—ನೀವೆಂದಂತೆ ಪ್ರಾಣನಾಥ.

ಶಂಬರಾಸುರ—ಒಳ್ಳೆಯದು. ಇವೆಲ್ಲ ಶುಭಕಾರ್ಯಗಳಿಗೂ ಕಾರಣರಾದ ಉಮಾಮಹೇಶ್ವರರನ್ನು ಲೋಕದಲ್ಲಿ ಸತಿಪತಿಯರೆಂದೆಂದೂ ಒಂದಾಗಿ ಪ್ರೇಮಜೀವನ ನಡೆಸಲೆಂದು ಲೋಕಹಿತಕ್ಕಾಗಿ ತನ್ನ ದೇಹವನ್ನೇ ಬಲಿ

ಗೊಟ್ಟು ದೇವಲೋಕಕ್ಕೆ ನಡೆದ ಕಾಮದೇವನು ಸರ್ವಜೀವರಾಶಿಗಳಲ್ಲಿಯೂ ನೆಲೆಸುವಂತೆಸಗಿದ ಆ ಜಗನ್ಮಾತಾಪಿತೃಗಳನ್ನು ಭಜಿಸುವ. ಜಗನ್ಮಾತೆಯ ಸ್ತೋತ್ರವಾಗಲಿ.

ಸರ್ವರೂ—(ರಾಗ—ಇಂಗ್ಲೀಷು ನೋಟು)

ಕರುಣಿಸೆ ಕುಲದೇವಿಯೇ
ಕರುಣಿಸಿ ಪೊರೆಯೇ ।
ಧರಣಿ ಸ್ವರ್ಗ ನರಕದಿರುವ
ಸಕಲ ಜೀವರಾಶಿಗಳನೇ
ಪೊರೆಯೆ ದೇವಿ ನೀಂ ॥

(ಅಂತೆಯೇ)

ಶುಭ ವಿಭವಕರನೆನಿಪ ದೇವ ಪರಿಪಾಲಿಸು ।
ದೇವ ಜಗತೀಧವಾ ಭಯಹರ ದಯಾಕರ ।
ದೇವ ಯಮಪಾಶಹರ ಕ್ಲೇಶಹರ ಭಾಸ್ಕರಾ ॥

ದೇವರೇ ಸರ್ವರಿಗೂ ಮಂಗಳವನ್ನುಂಟುಮಾಡುವಂಥಾವನಾಗು.

(ಎಲ್ಲರೂ ಹೊರಟು ರಂಗದಲ್ಲಿ ಮಹಾರಾಜ ವಿದೂಷಕ-ಇಬ್ಬರೇ ನಿಲ್ಲುವರು.)

**ಶಂಬರಾಸುರ**—ಎಲ್ಲರಿಗೂ ಅವರವರ ಇಷ್ಟಾರ್ಥವನ್ನೇನೋ ಸಲ್ಲಿಸಿದೆ ನಾನು. ಆದರೆ ನನ್ನ ಇಷ್ಟಾರ್ಥವನ್ನೇ ಸಲ್ಲಿಸಿಕೊಳ್ಳಲು ಅಸಮರ್ಥನಾದೆನಲಾ ಮಾಂಡವ್ಯ? ಏನೆನ್ನುವೆ?

**ವಿದೂಷಕ**—ಮಹಾರಾಜ! ಸಾರ್ವಭೌಮನೆನಸಿಕೊಂಡವನಿಗೆ ಪರರ ಹಿತ ಮುಖ್ಯವೇ ಹೊರತು ಸ್ವಹಿತವಲ್ಲ. ಪರರ ಹಿತಾಕಾಂಕ್ಷಿಯಾದ ನೀನು ನಿನ್ನ ಸ್ವೇಚ್ಛೆಯನ್ನು ಬಲಿಕೊಟ್ಟುದು ಲೋಕಮಾನ್ಯ ಮಹಾರಾಜ ಲೋಕಕ್ಕೇ ಆದರ್ಶರೂಪನಾದ ಶಂಬರಾಸುರನಿಂದ ಈ ತ್ಯಾಗ ಸಾಧ್ಯವಲ್ಲದೆ ಬೇರಾರಿಂದ ಸಾಧ್ಯ? ಈ ಸಂಧಿಯಲ್ಲಿ ನನಗೂ ಸಮಾರಾಧನೆಯೇ ಆಗಿ ಹೋಯಿತು ಇನ್ನು ಹೊಸ ಮಹಾರಾಜ ಮಹಾರಾಣಿಯರ ಸೇವೆಗೆ ಅಣಿ

ಮಾಡಿಕೊಳ್ಳುತ್ತೇನೆ ಮಹಾರಾಜ. ತಾವೂ ಮಹಾರಾಣಿಯೂ ಅರಣ್ಯಕ್ಕೆ ಇನ್ನು ಪ್ರವಾಸ ತೆರಳಬಹುದು. ನನಗಂತೂ ಇಲ್ಲಿ ನಿತ್ಯದ ವ್ಯಾಖ್ಯಾನ ಕಾದಿದೆ. ತಪೋವನದಲ್ಲಿ ಆಗಾಗ್ಗೆ ನನ್ನನ್ನು ಜ್ಞಾಪಿಸಿಕೊ ಮಹಾರಾಜ. ಮಹಾರಾಜ ! ನಿನಗೆ ಮಂಗಳವಾಗಲಿ ಶುಭ ಮೊಸ್ತು, ಶಾಂತಿ ರಸ್ತು, ಆರೋಗ್ಯ–ಮೊಸ್ತು, ತಮಗೆ, ನನಗೆ ಇಲ್ಲಿ ನೆರದಿರುವವರಿಗೆಲ್ಲ, ಭದ್ರಂ, ಶುಭಂ, ಮಂಗಳಂ.

—ದೊಡ್ಡ ಅಂಕದ ಪರದೆ ಬೀಳುವುದು—

ಇಲ್ಲಿಗೆ ಶಂಬರಾಸುರ ನಾಟಕ—ಉಪನಾಟಕಗಳು—

ಸಂಪೂರ್ಣಂ.

[ನಂಜನಗೂಡಿನಲ್ಲಿ ಈ ನಾಟಕ ಆಡಬೇಕೆನ್ನುವ ಮೊದಲು ಅದರ ಪಾತ್ರ, ರೂಪರೇಷೆಗಳನ್ನು ಕೈಲಾಸಂ ಸ್ವಯಂ ಗುರುತು ಹಾಕಿದರು. ಆ ಬಗ್ಗೆ ಮೂರು ಪಡಿಯಚ್ಚುಗಳನ್ನು ಕೊನೆಯಲ್ಲಿ ಮುದ್ರಿಸಿದೆ. ಅದರಲ್ಲಿ ನಂಕಂಪ್ನಿ ನಾಟಕದ ಶೀರ್ಷಿಕೆ, ಪಾತ್ರ, ಪದ್ಯ, ಬರೆದಿರುವುದೂ ಇದೆ ಶಂಬರನ ಶೃಂಗಾರದ ಸಂಭಾಷಣೆಯ ಚೂರೂ ಇದೆ. ಕಂದ ಪದ್ಯ ಅವರೇ ಯಾವ ರೀತಿ ಹೊಳೆದಂತೆ ರಚಿಸುತ್ತಿದ್ದರೆಂಬುದನ್ನೂ ಕಾಣಬಹುದು. ಸಂ.]

ಅ ನು ಬಂ ಧ

# ಕೈಲಾಸಂ ಸಂಗೀತ

## ಬಿ. ವಿ. ಕೆ. ಶಾಸ್ತ್ರಿ

ನಾಗತ್ತೆ ಮತ್ತು ಅಹೋಬಲುಗಳನ್ನು ಸೃಜಿಸಿದ ಕೈಲಾಸಂ ಅವರಿಗೆ ನಾಟಕ ಕಲೆಯನ್ನೊಂದುಳಿದು ಮಿಕ್ಕ ಕಲೆಗಳನ್ನು ಯುಕ್ತವಾದ ದೃಷ್ಟಿಯಿಂದ ಪರಿಶೀಲಿಸಲು ಸಾಧ್ಯವಿತ್ತೇ ಎಂದು ಯಾರಿಗಾದರೂ ಆಶ್ಚರ್ಯವಾಗದಿರದು.

'ಹಾಸ್ಯ ಪ್ರಹಸನ ಪ್ರಪಿತಾಮಹ' 'ವ್ಯಂಗ್ಯ ನಾಟಕಾಚಾರ್ಯ' ಎನ್ನಿಸಿ ಕೊಂಡಿದ್ದ ಕೈಲಾಸಂ ಅವರು ಸಂಗೀತಕ್ಕೇ ವಿಶೇಷ ಸ್ಥಾನವನ್ನೀಯದೆ ಅದನ್ನೂ ವ್ಯಂಗ್ಯರೂಪಕ್ಕಿಳಿಸಿದರು. ಆದರ ಅದರಲ್ಲಿ ಸಾಹಿತ್ಯ ಮತ್ತು ಅಭಿನಯ ಭಾಗಗಳು ಮಾತ್ರ ವ್ಯಂಗ್ಯವೇ ಏನಾ ಸಂಗೀತ ಭಾಗವು ಮಾತ್ರ ತನ್ನ ಸುಸ್ವರೂಪವನ್ನುಳಿಸಿಕೊಂಡಿತು.

ಅಚ್ಚ ತಮಿಳರಾದ ಕೈಲಾಸಂರವರಿಗೆ, ಇಷ್ಟವಾದುದು ಕರ್ನಾಟಕ ಸಂಗೀತವೆಂದು ಒತ್ತಿ ಹೇಳಬೇಕಾಗಿಲ್ಲ. ವಿಶ್ವದ ಬೇರೆ ಬೇರೆ ನಾಡಿನ ಸಂಗೀತದ ಪರಿಚಯವನ್ನೂ ಸಾಕಷ್ಟು ಹೊಂದಿ ಅದರ ಸ್ವರೂಪವರಿತಿದ್ದವರು ಅವರು. ಕರ್ಣಾಟಕ ಸಂಗೀತ, ಹಿಂದೂಸ್ತಾನೀ ಸಂಗೀತ ಇವುಗಳಲ್ಲಿ ಯಾವ ರಾಗ ಹಾಡಿದರೂ ಇತರ ನಾಡಿನ, ಅದರಲ್ಲೂ ಪಾಶ್ಚಾತ್ಯ ಸಂಗೀತದ ರಾಗಗಳ ಸ್ವರಗಳನ್ನೂ ನುಡಿದು ಅಲ್ಲಿನ ಯಾವ ರಾಗಕ್ಕೆ ಇಲ್ಲಿನ ಯಾವ ರಾಗ ಹೊಂದುತ್ತದೆಯೆಂದು ಹೇಳುವ ಸಾಮರ್ಥ್ಯವಿತ್ತು.

ಕರ್ಣಾಟಕ ಸಂಗೀತದಲ್ಲಿಯಾದರೋ ಅವರದು ಅರಿಯಕ್ಕುಡಿ, ಶೆಮ್ಮಂಗುಡಿ, ಜಿ. ಎನ್. ಬಿ. ಗಳನ್ನು ಹುಡುಕಿಕೊಂಡುಹೋಗಿ ತಲೆಯಲ್ಲಾಡಿ ಸುವ ಮಾದರಿಯಲ್ಲ. ಶಾಸ್ತ್ರೀಯವಷ್ಟೇ ಆದರೂ ನಾಟಕರಂಗದಲ್ಲಿ ಸರಳ ಮತ್ತು ಸುಸ್ವರೂಪದಲ್ಲಿ ತರಲ್ಪಟ್ಟಿದ್ದ ಸಂಗೀತವು ಅವರಿಗೆ ಬಹು ಆದರಣೀಯ. ಅವರ ಜೀವನದ ಪೂರ್ವಭಾಗದಲ್ಲಿ ಕನ್ನಡ ನಾಟಕರಂಗದಲ್ಲಿನ

ಸಂಗೀತಕ್ಕೆ ಬೊಂಬಾಯಿನ ಫಿಲ್ಮ್ ಹಾಡುಗಳ ಆಶ್ರಯ ಹೊಗಬೇಕಾದ ದುರ್ಗತಿ ಒದಗಿರಲಿಲ್ಲ. ಅಚ್ಚ ಕರ್ನಾಟಕ ಸಂಗೀತದ ಸರಳ ಮತ್ತು ಜನಾದರಣೀಯ ರೂಪಗಳು ನಾಟಕರಂಗದಲ್ಲಿ ಚಾಲ್ತಿಯಲ್ಲಿದ್ದವು. ಈ ರೂಪ ನಿರೂಪಣೆಯಲ್ಲಿ ಅಗ್ರಗಣ್ಯರಾಗಿದ್ದ ನಾಟಕ ಶಿರೋಮಣಿ ವರದಾಚಾರ್ಯ ರೆಂದರೆ ಕೈಲಾಸಂರವರಿಗೆ ಬಹುಗೌರವ ಆ ಸಂಗೀತವನ್ನು ವ್ಯಂಗ್ಯರೂಪದಲ್ಲಿ ಪ್ರದರ್ಶಿಸಿದರೂ ಕೈಲಾಸಂರವರು 'ಯಜಮಾನರು' (ವರದಾಚಾರ್ಯರು) ಎಂದರೆ ಬಹು ಗೌರವಪೂರ್ವಕವಾಗಿಯೇ ಸಂಬೋಧಿಸುತ್ತಿದ್ದರು. ಆ ಗೌರವ ಸೂಚನೆಯಿಂದಲೋ ಏನೋ ಕೃತಿಗಳ ಮಾದರಿಯಲ್ಲಿ ಸಾಹಿತ್ಯಾಭಿನಯಗಳು ವಿನಾ ಮಿಕ್ಕ ಭಾಗವು ವ್ಯಂಗ್ಯಾಭಿನಯಕ್ಕೆ ಒಳಪಡಲಿಲ್ಲ.

ಕೈಲಾಸಂರವರ ಸಂಗೀತ ಸಾಮರ್ಥ್ಯವು ಅಂದಿನ ನಾಟಕರಂಗದ ವ್ಯಂಗ್ಯ ರೂಪಕಗಳಾದ 'ನಮ್ಕಂಪ್ನಿ' 'ಶಂಬರನ ಶೃಂಗಾರ' ಮುಂತಾದವು ಗಳಲ್ಲಿ ಕಾಣಬರುತ್ತವೆ. ಅದರಲ್ಲಿ ನಮ್ಮ 'ಹಂಸಧ್ವನಿ' ಯು 'ಕಂಸಧ್ವನಿ' ಯಾಗಿ ಕಂಸಾಸುರನಿಗೆ ಉಚಿತವಾದ ರೀತಿಯಲ್ಲಿ ಪ್ರದರ್ಶಿತವಾದರೂ, ಉಳಿಯುವುದು ಮಾತ್ರ ಹಂಸಧ್ವನಿಯ ರೂಪದಲ್ಲಿಯೇ. 'ನರ ನಿರ್ಝರರ ನರನರುಕಿ' ಸಿದರೂ. ಈ ವಿಶೇಷ ಘರ್ಜನೆಗೆ ರಂಗಭೂಮಿಯು ತಲ್ಲಣಿಸಿ ದರೂ, ಅದು ಬರುತ್ತಿದ್ದುದು ಹಂಸಧ್ವನಿಯ ರೂಪದಲ್ಲಿಯೇ. ಅವರ 'ಇಂದಿರೆಯ, ನಿಜ ಮಂದಿರಕೆ. ಎಳೆ ತಂದು' ಭಾಗದಲ್ಲಿನ ಕೆಲವು ಗಮಕ ಪೂರಿತ ಸಂಚಾರಗಳು ಸಂಗೀತ ವಿದ್ವಾಂಸರು ಅರಿಯಲು ಯುಕ್ತವಾದು ದೆನ್ನಲ್ಲಡ್ಡಿಯಿಲ್ಲ. ಇದಲ್ಲದೆ ಅವರ ಕಮಾಚ್, ಅಠಾಣ, ಸುರಟಿ ರಾಗ ಕೃತಿಗಳೂ ವ್ಯಂಗ್ಯ ರೂಪಕಗಳೇ ಆದರೂ, ಆಯಾ ರಾಗಭಾವವು ಯಾವ ಭಾಗದಲ್ಲಿಯೂ ವ್ಯತ್ಯಾಸವಾಗದೆ ತುಂಬಿ ತುಳುಕುತ್ತಿದ್ದಿತು ಅವರಿಗೆ ಪ್ರಿಯವಾದ ಕೃತಿಗಳಲ್ಲಿ 'ಸರಸ ಮುಂಲಾಡನೆ' ಎಂಬ ಹಿಂದೂಸ್ಥಾನಿ ಕಾಪಿಯ ಜಾವಳಿಯು ಮಾದರಿ ಒಂದು. ಬಿಡುವಾದಾಗಲೆಲ್ಲ ಅದನ್ನು ಸ್ವಲ್ಪ ಕುರುಕುತ್ತಿದ್ದರು. ಅವರ ಬಳಿ ಸುಳಿದುಹೋದ ಎಷ್ಟೋ ವಾದ್ಯಗಳಲ್ಲಿ ಉಳಿದುಕೊಂಡಿದ್ದ ಒಂದು ಬಡಕಲು ಬುಲ್‌ಬುಲ್ ತರಂಗ್ ವಾದ್ಯದಲ್ಲಿ ತಕ್ಷಣವೇ ಅದನ್ನು ನುಡಿಸಿ ಆತ್ಮ ತೃಪ್ತಿಯನ್ನು ಪಡೆಯುತ್ತಿದ್ದರು. ಹೊಸ

ಹಾಡಿಗೆ ಸ್ಫೂರ್ತಿ ಒರಬೇಕಾದರೂ ಅದೇ ವಾದ್ಯವೇ ಕೊಡುತ್ತಿದ್ದಿತು. ಅವರ ಘರ್ಜ್ಜರಾಗವೂ ಅಷ್ಟೆ. ಅದರ 'ಏನ್ನ ದೈವವೇ' ಭಾಗದ ಗಮಕ ಪೂರಿತ ಸಂಚಾರವನ್ನು ಅನೇಕ ಸಂಗೀತಜ್ಞರು ಅರಿಯಲವಶ್ಯಕವಾದುದೆನ್ನ ಬಹುದು.

ಈ ಎರಡು ಕೃತಿಗಳಲ್ಲಿ ಕೈಲಾಸಂರವರ ಸಂಗೀತವು ಶುದ್ಧ ಮತ್ತು ಸರಳವಾದ ಕರ್ಣಾಟಕ ಸಂಗೀತವೆನ್ನಬಹುದು. ಅವರು ನಾಲ್ಕರಿಂದ ಐದನೆಯ ಮನೆಯ ಶೃತಿಯವರೆಗೂ ಸರಾಗವಾಗಿ ಹಾಡುತ್ತಿದ್ದುದರಿಂದ, ಅವರ ಜತೆಯಲ್ಲಿ ಹಾಡಬೇಕಾದವರಿಗೆ, ಹೆಚ್ಚಿನ ಶೃತಿಯಿಲ್ಲದಿದ್ದಲ್ಲಿ ಬಹು ಕಷ್ಟವೇ ಆಗುತ್ತಿದ್ದಿತು. ಇದಲ್ಲದೆ ಅವರ ಕಂಠವು ಬಹು ನಾದಪೂರಿತ ವಾದುದರಿಂದ, ನಾಟ್ಯರಂಗವೆಲ್ಲಾ ಪ್ರತಿಧ್ವನಿತವಾಗಿ, ಸಾಮಾನ್ಯವಾಗಿ ಇತರರ ನಾದವು ಮುಚ್ಚಿಯೇ ಹೋಗುತ್ತಿದ್ದಿತೆನ್ನಬಹುದು. ಅವರು ಹಾಡಿದ ನಾನಾ ಕೃತಿಗಳಲ್ಲೆಲ್ಲಾ ನನ್ನ ಮನವನ್ನು ಕಲಕಿದ ಕೃತಿಯೆಂದರೆ, ಅವರ 'ಶಂಬರನ ಶೃಂಗಾರ'ದ ಬೇಗಡೆ ರಾಗದ 'ಎಳೆಯ ತಾವರೆಯಂತೆ' ಕೃತಿ. ಅದರ ಪೂರ್ಣರಾಗರಸಭಾವವು ಇಂದಿಗೂ ನನ್ನ ಹೃದಯವನ್ನು ಕಲಕು ತ್ತಿದೆ. ಕಂಬನಿಯನ್ನು ತರುತ್ತಿದೆ.

ಬೇಡಿಕೊಂಡರೂ ಇವರೇನೂ ಕೇಳುವಹಾಗಿಲ್ಲ ಎಂದೂ, ಇವರು ಹಾಡಲು ತೊಡಗಿದರೆ ಸಭಿಕರಲ್ಲಿ ಯಾರಾದರೊಬ್ಬರು ಮುಂಚೆ ಬರುವ ಶಿಲನ್ನು ಮಾತು ಗಳನ್ನು ಹಾಡಲು ಉಪಕ್ರಮಿಸಿದರೆ, ಹಾಡುವವರ ಬಾಯಿಕಟ್ಟಿದಂತಾಗಿ ಈ ಅಣಕವಾಡು ತಾನಾಗಿ ನಿಂತುಹೋಗಬಹುದು ಎಂದೂ ಈಗ ಹೊಸ ಕವಿತೆ, ಹೊಸರಾಗ, ಹೊಸಧಾಟಿ ಇವುಗಳಲ್ಲಿಯೇ ಆಸಕ್ತಿ ಹೆಚ್ಚಿ ಹಳೆಯದರ "ಅಣಕವಾಡು" ನಿಲ್ಲಬಹುದು ಎಂದೂ, ಅವರಿಗನಿಸಿರಬೇಕು. ಅದಕ್ಕಾಗಿ "ನಂಕಂಪ್ನಿ" ಮತ್ತು "ಶಂಬರನ ಶೃಂಗಾರ" ಎಂಬ ನಾಟಕಗಳ ಸೃಷ್ಟಿ ಯಾಯಿತು. ಇದರ ಕಲ್ಪನೆ ೧೯೨೧ ರಲ್ಲೇ ಆದರೂ ರಂಗಭೂಮಿಗೆ "ಶಂಬರನ ಶೃಂಗಾರ" ಮೊದಲಸಾರಿ ಅಪೂರ್ಣವಾಗಿ ಅವತರಿಸಿದ್ದು ಸುಮಾರು ೧೨ ವರ್ಷಗಳ ಅನಂತರ, ಅದೂ ನಂಜನಗೂಡಿನಲ್ಲಿ.

**ಆಕ್ಷನ್ ಸಾಂಗು (Action Vs. Auction, songs) ಗಳು:**

"ಶೂರ್ಪನಖಾ" ದಲ್ಲಿ ಬರುವ ಕಂದ ಮತ್ತು ಹಾಡುಗಳು ವರದಾಚಾರ್ಯರ ಕಂಪೆನಿಯಲ್ಲಿ ಹಾಡಲ್ಪಡುತ್ತಿದ್ದ ಧಾಟಿಯಲ್ಲಿವೆ. ಆದರೆ ಅಲ್ಲಿ ಅವುಗಳಿಗೆ ಅಷ್ಟು ಪ್ರಾಮುಖ್ಯತೆ ಕೊಡಲಿಲ್ಲ. ನಾಟಕವಾಡುವ ರೀತಿಯಲ್ಲಿನ ಕುಂದುಗಳೆತ್ತಿ ತೋರಿಸಲು ಅದು ಸಾಧಕವಾಯಿತು. "ಶಂಬರನ ಶೃಂಗಾರ" ವಾದರೋ "ಮನ್ಮಥ ವಿಜಯ"ದ ಎರಡುಮೂರು ಸನ್ನಿವೇಶಗಳ ಜೋಡಣೆ. ಇಲ್ಲಿ ಕಥೆಯೋ ಚಿಕ್ಕದು. ಆದರೆ ಉಸಿರೆತ್ತಿದರೆ ಒಂದು ಕಂದ, ಒಂದು ಹಾಡು. ಮೊದಮೊದಲು ಮಾತು ಬಹಳ ಕಡಿಮೆ. ಸನ್ನಿವೇಶವೋ, ಮನ್ಮಥ ದಹನವಾಗಿ ಹರಪಾರ್ವತಿಯವರಿಂದ ಕಣ್ಣೊರೆಸ ಲ್ಪಟ್ಟ ರತಿದೇವಿ, ಶಂಬರಾಸುರನ ರಾಜ್ಯದ ರಾಜಧಾನಿಗೆ ಬರುವ ಹಾದಿಯಲ್ಲಿನ ಗೊಂಡಾರಣ್ಯವೊಂದನ್ನು ಹೊಕ್ಕು ಅದಕ್ಕಂಟಿರುವ ನಗರದ ಹೊರವಲಯದ ಉದ್ಯಾನವನಕ್ಕೆ ಕಾಲಿಡುತ್ತಿದ್ದಾಳೆ. ಆ ಗೊಂಡಾರಣ್ಯದಲ್ಲಿ ವನ್ಯ ಕ್ರೂರ ಮೃಗಗಳ ಹಾವಳಿ ಹೆಚ್ಚಾಗಿ ಜನಕ್ಕೆ ತೊಂದರೆಯಾಗಿರುತ್ತದೆಯಾಗಿ, ಶಂಬರಾಸುರ ಆ ಜನರ ಮೊರೆ ಕೇಳಿ ಅದೇ ಹೊತ್ತಿಗೆ ಅಲ್ಲಿಗೆ ಬಂದು ಸಿಂಹ ವೊಂದನ್ನು ತಡೆದು ನಿಲ್ಲಿಸಿ ಅದರ ಕಿವಿ ಹಿಂಡುತ್ತಾ "ಇನ್ನುಮೇಲೆ ಜನ ಸುಳಿದಾಡುವ ಕಡೆ ಬರಬೇಡ, ಬಂದರೆ ನಿನ್ನನ್ನು ಬೇಟೆಯಾಡಿ ಕೊಲ್ಲಲೇ

ಬೇಕಾಗುತ್ತದೆ ಮೃಗಗಳೂ ಮನುಷ್ಯರೂ ಪರಸ್ಪರ ಪ್ರೇಮಿಸಿ ಜೀವಿಸ ಬೇಕು ಈ ಪ್ರೇಮಜೀವನಕ್ಕೆ ಭಂಗಬಂದಾಗ ಮಾತ್ರ ಜನರ ಭಯ ನಿವಾರಣೆ ಮಾಡಲು ಪ್ರಾಣಿಹಿಂಸೆ ಮಾಡಬೇಕಾಗುತ್ತದೆ ನನ್ನ ರಾಜ್ಯದಲ್ಲಿ. ಈ ಸಾರಿ ನಿನ್ನನ್ನು ಬಿಟ್ಟಿದ್ದೇನೆ—ಹೋಗು" ಎಂಬರ್ಥಬರುವಂತೆ ಹೇಳುತ್ತಿರುತ್ತಾನೆ. ಅದು "ಆಗಲಿ" ಎಂದು ಹೂಂಕರಿಸಿ ಹಿಂತಿರುಗುತ್ತದೆ –ಇನ್ನು ಪಟ್ಟಣಕ್ಕೆ ತೆರಳುವಷ್ಟರಲ್ಲಿ ರತಿದೇವಿ ಎದುರಾಗುತ್ತಾಳೆ—ಅಲ್ಲಿ ಪರಸ್ಪರ ಪ್ರಶ್ನೋ ತ್ತರಗಳು, ಕಂಪ ಹಾಡುಗಳೆಲ್ಲ ನಡೆಯುತ್ತವೆ—ಅನಂತರ ಅರಮನೆಗೆ ಪ್ರವೇಶ. ಶಂಬರ, ಸಿಂಹಾಸನದ ಮೇಲೆ ಕುಳಿತು "ಎಳೆಯ ತಾವರೆಯಂತೆ ಪೊಳೆವ ನಿನ್ನಾಸ್ಯದ ಚೆಲುವಿಗೆ ಮರುಳಾದೆನಾಂ—ನೀರೇಜನೇತ್ರೇ" ಎಂಬುದನ್ನು ಪ್ರತಿ ಅಕ್ಷರವನ್ನೂ ಅರ್ಥವತ್ತಾಗಿ (Action Auction ಆಕ್‌ಷರ್) ಅಭಿನಯಿಸುತ್ತಾ ಹಾವಭಾವಯುಕ್ತವಾಗಿ ಹಾಡುತ್ತಾನೆ— ಅನಂತರ ರತಿಯ ಉತ್ತರ. ಆಕೆಯ ಪುತ್ರ, ಪ್ರದ್ಯುಮ್ನನೊಡನೆ ವಿವಾಹ – ಹೀಗೆ ಕತೆ ಮುಕ್ತಾಯವಾಗುತ್ತದೆ – ಇದನ್ನು ಅಗುಮಾಡಿಸಿದ ಶಂಬರ, ರಾಣಿಯೊಡನೆ ವಾನಪ್ರಸ್ಥ ಆಶ್ರಮ ಸ್ವೀಕರಿಸಿ, ತಪೋವನಕ್ಕೆ ತಪಸ್ಸಿಗಾಗಿ ಪ್ರವಾಸ ತೆರಳುತ್ತಾನೆ. ಅದುವರೆಗಿನ ಅವನ ಸಂಭಾಷಣೆ, ಹಾಡುಗಳಲ್ಲಿ, ಅಭಿನಯಪೂರ್ವಕ. ಅದಕ್ಕೇ ಇದರ ಹೆಸರು "ಶಂಬರನ ಶೃಂಗಾರ".

### ಪ್ರವೇಶ—ಪ್ರಯಾಸ—ಪ್ರವಾಸ

ಈ ನಾಟಕವನ್ನು ಕೈಲಾಸಂ ಶಂಬರನ ಅರಣ್ಯ ಪ್ರವೇಶ, ಅರಮನೆಯಲ್ಲಿ ಪ್ರಯಾಸ. ಮತ್ತೆ ತಪೋವನಕ್ಕೆ ಪ್ರವಾಸ, ಎಂದು ಮೂರು ಅಂಕವಾಗಿ ಕಲ್ಪಿಸಿದರು. ಅರಣ್ಯ ಪ್ರವಾಸವಾಗುವ ಮುನ್ನ ಸಿಕ್ಕುವ ಉದ್ಯಾನವನದಲ್ಲಿ "ಎಲ್ಲಿ ನೋಡಲು ಶೋಭಿಕುಂ" ಎಂಬ ಹಾಡನ್ನು "ಎಲ್ಲಿ ನೋಡಲು ಹಾರ್ರಿಬಲ್" ಎಂದೆನಿಸಿದರು. ಅರಮನೆಯಲ್ಲಿ ಶಂಬರನು ಪುತ್ರ ಕೈಗೊಂಡಿ ರುವ ರತಿಯನ್ನು ಮನವೊಲಿಸಲಾರದೆ ವಿಫಲನಾದುದನ್ನು ತೋರಿಸುವ ಹಾಡು—ಕಂದಗಳನ್ನು ಹಾಡಿಸಿದರು. ಕೊನೆಗೆ ತಪೋವನಕ್ಕೆ ತೆರಳುವಾಗ ಗೋಳಿನ ರಾಗಗಳಲ್ಲಿ ಕವನ ಕಟ್ಟಿಸಿ ಹಾಡಿಸಿದರು—ನಟನಟಿಯರು ಇವು ಗಳನ್ನು ಹಾಡಿ ಕುಲಗೆಡಿಸುವುದಿರಲಿ; ಸಭಿಕರಿಗೂ ಸಾರ್ವಜನಿಕರಿಗೂ

ಆ ಜಾಡ್ಯ ಅಂಟಿ ಆ ಕವನದ ನಂಡಿ ಕೇಳಿಸದಿದ್ದವರೂ ಆ ಧಾಟಿ ಮಾತ್ರ ಹಿಡಿದು ತಮಗೆ ತೋಚಿದ ಪದಗಳನ್ನೂ ಜೋಡಿಸಿ ಹಾಡುವುದನ್ನು ತಡೆಗಟ್ಟಲು ಸಾಧನವಾಗುವಂತೆ ಈ ಮೂರು ಅಂಕಗಳ ಮಧ್ಯೆ "ಮೆಟ್ಟು ಗಳಿಗೆ ಮೆಟ್ಟು" ವೆಂಬ ಎರಡು ಮೂರು "ಕಾಮಿಕ್" ಸೀನುಗಳನ್ನು ಜೋಡಿಸಿದರು. ಅದೂ ಒಂದು ಕತೆಯ ರೂಪದಲ್ಲಿಯೇ ಬಂದಿತು ಆ ಸೀನುಗಳನ್ನು ಸರಪಳಿಯಂತೆ ಜೋಡಿಸಲಾಗಿತ್ತು. ಮನ್ಮಥ ವಿಜಯ ದಲ್ಲಿನ ಉದ್ಯಾನವನ ಮತ್ತು ಅರಮನೆಯ ಮುಂಭಾಗದ ತರುಲತಾಭರಿತ ರಾಜಮಾರ್ಗಗಳು, ಶಂಬರನು ಹೊಗುವ ಗೊಂಡಾರಣ್ಯ, ರತಿ ಮನ್ಮಥರ "ಬಾಲ್ಕನಿ ಸೀನು" ಇವೆಲ್ಲ ಕ್ರಮವಾಗಿ, ಅದೇ ಪರದೆಗಳೂ ಸೈಡ್‌ವಿಂಗ್ಸೂ ಇದ್ದರೂ, ಬೀರ—ಬೀರಿ, ಬೋರ-ಬೋರಿ, ಮಾರಾ—ಮಾರಿ, ಹೀಗೆ ಝಾಡಮಾಲಿ ಜನರಂಥವರ ಸಂಸಾರದ ಕತೆಗಳ ದೃಶ್ಯಗಳು ಕೆಲವನ್ನು ತೋರಿಸುವ ಸಾಧನಗಳಾಯಿತು ಇದರಲ್ಲಿ ಬೀರಿಯು ತರಕಾರೀ ಮಾರುವ ಹೆಣ್ಣು. ಮಾರ್ಕೆಟ್ಟಿನಲ್ಲಿ ತರಕಾರಿ ರಾಶಿಯ ಮುಂದೆ ಮಹೋದರಿಯಾದ ಈಕೆ, ಬಾಯಿತುಂಬ ಎಲೆ ಅಡಿಕೆ ಹೊಗೆಸೊಪ್ಪು ಜಗಿಯುತ್ತ ಮುಂದಿರುವ ಮೋರಿಗೆ ಉಗಿಯುತ್ತ ಬಂದ ಗಿರಾಕಿಗಳೊಡನೆ ಮಾತನಾಡುವ ದೃಶ್ಯದಿಂದ "ಮೆಟ್ಟುಗಳಿಗೆ ಮೆಟ್ಟು" ನಾಟಕದ ಸೀನುಗಳು ಆರಂಭವಾಗುತ್ತವೆ.

**ಹಾಡುಗಳ ಹುಳಿಕರಣೆ**

ಇಲ್ಲಿ ಸಂಭಾಷಣೆಯೆಲ್ಲ "ಮನ್ಮಥ ವಿಜಯ" "ರತ್ನಾವಳಿ" "ಶಾಕುಂತಲ" ನಿರುಪಮ, ನಾಟಕಗಳಲ್ಲಿ ಬರುವ ಹಾಡು—ಕಂದಗಳಿಂದ ಕೂಡಿ ಶೋಭಿಸುತ್ತದೆ. ಈ ಹಾಡು, ಕಂದಗಳ ಧಾಟಿ, ಶೈಲಿ, ರಾಗ, ತಾಳಗಳೇನೋ ಅವುಗಳಂತೆಯೇ. ಆದರೆ ಸನ್ನಿವೇಶಕ್ಕೆ ತಕ್ಕ ಮಾತುಗಳನ್ನು ಜೋಡಿಸಿದೆ. ಆ ನಾಟಕಗಳ ಹಾಡು—ಕಂದಗಳು "ಸಂಗೀತದ ಸೀಕರಣೆ" ಯಾದರೆ, ಇವು "ಹಾಡುಗಳ ಹುಳಿಕರಣೆ" ಎಂದರು ಕೈಲಾಸಂ.

ಮೊದಲು ಒಬ್ಬ ಮದರಾಸಿನ ಅಯ್ಯರು ತರಕಾರಿ ಅಂಗಡಿಗಳನ್ನೆಲ್ಲ ದಾಟು, ಕೈಲಿ ಕೋಲು ಹಿಡಿದು, ಬಾಯಲ್ಲಿ ಅಡಿಕೆ ಎಲೆ ಅಗಿದು, ಬಾಯೆಂಜಲನ್ನು ಅಂಗಡಿಗಳ ಮುಂದಿರುವ ಮೋರಿಯ ಕೊನೆಯಲ್ಲಿರುವ "ಉಗುಳು

ಗುಂಡಿ" ಗೆ ಉಗುಳಿ ಬೀರಿಯು ಅಂಗಡಿಯ ಮುಂದೆ ಬಂದು ನಿಲ್ಲುತ್ತಾರೆ. ಇವರು ಸೀನಿಗೆ ಬಂದದ್ದೇ ತಡ. ಗಿರಾಕಿಯನ್ನು ತಮ್ಮ ತಮ್ಮ ಅಂಗಡಿಗಳಿಗೆ ಆಹ್ವಾನಿಸುವ ಭರದಲ್ಲಿ ಅಂಗಡಿ ಮಾಲಿಕ ಹೆಣ್ಣುಗಳೆಲ್ಲ ಅವರವರ ಅಂಗಡಿಯಲ್ಲಿರುವ ಸೊಪ್ಪು–ತರಕಾರಿ–ಗಡ್ಡೆಗಳ ಹೆಸರನ್ನು ಕೂಗುತ್ತಿರುತ್ತಾರೆ. ಅದೂ ಸೇರಿದರೆ ರಾಗವಾಗಿ "ಕಮಲಶರಾ. ಸುಮನೆನಿವಾರಮಣಿವಿರಲ್ಕಾ... ಕಾಮನೆನಿಪ ಸೋಮಮುಖಿಗೆ ಸುಮಶರದಿಂದಾ' ಎಂಬ ಹಾಡಿನ ಧಾಟಿಯಲ್ಲಿ "ದಂಟಿನ ಸೊಪ್ಪೂ, ಕೀರೆಯ ಸೊಪ್ಪೂ, ಹರಿವೆಯ ಸೊಪ್ಪೂ–ಚಪ್ಪರದವರೇಕಾಯಿ, ತಂಪ್ಪದ ಹೀರೇಕಾಯಿ.–ಅನ್ನುವವೇಳೆಗೆ–ಮಹೋದರಿ ಬೋರಿ ತನ್ನ ದಪ್ಪದನಿಯಲ್ಲಿ–"ಬೂದೀಗುಂಬಳಕಾಯಿ" ಎಂದು ದನಿಗೂಡಿಸಿ ಹಾಡಿನ ಪಲ್ಲವಿಯನ್ನು ಕೊನೆ ಮುಟ್ಟಿಸುತ್ತಾಳೆ! ಅಯ್ಯರೂ ಆ ಹೊತ್ತಿಗೆ ಬೋರಿ ಅಂಗಡಿ ಎದುರಿಗೆ ಬರುತ್ತಾರೆ. ಅವರಲ್ಲೇ ನಿಲ್ಲುವರೆಂಬ ಸಂಚುತಿಳಿದು ಎಲ್ಲ ಅಂಗಡೀ ಮಾಲೀಕರೂ ಒಟ್ಟಿಗೆ "ಹಾಗಲಕಾಯಿ ಬೆಂಡೇಕಾಯಿ, ಗೋರಿಕಾಯಿ," ಎಂದು ಕೂಗಿ ಕೊನೆಗೆ "ದಂಟಿನ ಸೊಪ್ಪೂ" ಪ್ರಾರಂಭಿಸಿ ಮಹೋದರಿ ಬೋರಿ ಹೇಳಿದ್ದ ಬೂದಿಗುಂಬಳಕಾಯಿಗೆ ಎದುರಾಗಿಯೋ ಎಂಬಂತೆ," "ದೊಣ್ಣೇ ಮೆಣಸಿನಕಾಯೀ" ಎಂದು ಹಾಡು ಪಲ್ಲವಿ ಮುಗಿಸುತ್ತಾರೆ. ಇದು ಸಾಮೂಹಿಕ ಗಾನ. ಪಾಶ್ಚಾತ್ಯದ ಆರ್ಕೆಸ್ಟ್ರದ — (ಆರ್‌ಚೆಸ್ಟ್– orchest) ರ ಅಲ್ಲ) ನಿಜವಾದ ಸ್ವರೂಪ ೫೦ ವರ್ಷದ ಹಿಂದೆ; ಅದೂ ಪೌರಾಣಿಕ ನಾಟಕವೊಂದರಲ್ಲಿ ನುಸುಳಿದ ಕಾಮಿಕ್ (ಕಾರ್ಮಿಕರ) ಸೀನ್‌ನಲ್ಲಿ.

### ಡೈಲಾಗು–ಹಾಡುಗಳು

ಅನಂತರ ಅಯ್ಯರು ಮಂಕ್ಕರಿ "ಮುಳ್ಳುಗಾಯಿ" ಹೊತ್ತ ಮಾರಿಯನ್ನು ನಿಲ್ಲಿಸಿ, ಮಂಕ್ಕರಿ ಇಳಿಸಿ, ಬದನೇಕಾಯಿಯನ್ನು ಕೋಲಿನ ಕೊನೆಯಿಂದ ಸೂಚಿಸುತ್ತ, "ಇಂದು ವದನೆ" ಎಂಬ ಹಾಡಿನ ಧಾಟಿಯಲ್ಲಿ, "ಇಂದು ಬದನೆಕಾಯಿಯಾ ಬೆಲೆ–ಒಂದೇ ಮಾತೊಳ್ ಪೇಳ್" ಎಂದು ಆರಂಭಿಸುವರು.

ಚರಣ: "ಕಳಿತ ಕೊಳೆತ, ಹುಳಿತ, ಕಾಯ್ಗಳಾ–ಕೊಳಲುಲ್ಲಾರ್ರೆನೇ" ಎಂದು ಆಲಾಪಸಹಿತ ಬೆಲೆ ಕೇಳುವರು; ಹೀಗೆ ಇದೊಂದು ಕಡೆ.

ಆ ಹೊತ್ತಿಗೆ ಮಾರ್ಕೆಟ್ಟಿನ ಮೇಲ್ವಿಚಾರಕ ಸ್ಯಾನಿಟರಿ ಇನ್‌ಸ್ಪೆಕ್ಟ ರೊಬ್ಬರು ಹಾಗೆಯೇ ಠಳಾಯಿಸುತ್ತ ಬರುವರು. ಮೋರಿಗಳಲ್ಲಿ, ಉಗುಳು, ಕಸ, ತರಕಾರಿ, ಪರ್ಸೀತರಕಾರಿಗಳ, ಕೊಳೆತ ಮೊಟ್ಟೆಗಳ ವಾಸನೆ ಮೂಸಿ ಅಭಿನಯಿಸಿ, "ಎಲ್ಲೀ ನೋಡಲೂ ಶೋಭಿಕುಂ" ಎಂಬ ಹಾಡಿನ ಧಾಟಿಗೆ ಸರಿಯಾಗಿ "ಎಲ್ಲಿ ನೋಡಲೂ ಹಾರ್‍ರಿಬಲ್—ಕೇರಿ ಕೇರಿಗಳಲ್ಲಿ ಮೋರಿಯು ವಾಸನೆ, ಕಾರು ಬಾಲಿಕ್ ಚೆಲ್ಲಿರೋ, ಚೆಲ್ಲಿರೋ ಅಲ್ಲಲ್ಲೀ"—ಎಂದು ಹಾಡಿ ತನ್ನ ಕಡೆಯ ಝಾಡಮಾಲಿಗಳಾದ ಬೀರ, ಮಾರ, ಬೋರ ಇವರಿಗೆ ಅಜ್ಞಾಪಿಸುವನು. ಇಲ್ಲಿನ ಹಾಡು ಹೀಗಿದೆ:—

ಹಾಡು—ಎಲ್ಲಿನೋಡಲೂ ಶೋಭಿಕುಂ—ಎಂಬಂತೆ

**ಎಲ್ಲೀನೋಡಲೂ** (ಮೂಗಿನಿಂದ ಮೂಸುತ್ತ)
**ಹಾರಿಬಲ್** (horrible) **! ಅಲ್ಲಲ್ಲೀ ! ॥**
**ಕೇರೀ ಕೇರಿಗಳಲ್ಲೀ ಮೋರಿಯು ವಾಸನೆ ।**
**ಕಾರು ಬಾಲಿಕ ಚೆಲ್ಲಿರೋ. ಅಲ್ಲಲ್ಲೀ ।**
**ಚೆಲ್ಲಿರೋ ಅ ಲ್ಲ ಲ್ಲೀ ॥**

(ಅತ್ತಿತ್ತ ಓಡಿಯಾಡುತ್ತ, ಕೈಗಳಿಂದ, ಕೈಯಲ್ಲಿನ ಬೆತ್ತದಿಂದ, ಜಾಗಗಳನ್ನು ಸೂಚಿಸುತ್ತ, ಮೂಗಿನಿಂದ ಮೂಸುತ್ತ . ಹಾಡುವನು ಕಾರ್‌ಬಾಲಿಕ್ ಚೆಲ್ಲಿಸುತ್ತ ಹೋಗುವನು)

ಮಾರಿಯು ರಂಗಕ್ಕೆ ಇಳಿದ ಕೂಡಲೇ ಬೋರಿಯು ತಮ್ಮ ಬೋರನಿಗೂ, ಮಾರಿಗಾಗೇದೇ ಅವತರಿಸಿರುವೆನೆಂದು ತಿಳಿದ ಮಾರನಿಗೂ, ಮಾರಿಯ ಪ್ರೇಮ ಸಂಪಾದನೆಗಾಗಿ ಸ್ಪರ್ಧೆಯಾಗುವುದು. ಇಲ್ಲಿಂದ ಈ ಮೂವರ 'ನಾಯಕ – ನಾಯಕಿ–ಖಳರ ಕತೆ' ಆರಂಭವಾಗಿ ರತ್ನಾವಳಿ, ಶಾಕುಂತಲ ನಾಟಕಗಳ ಹಾಡು ಕಂದಗಳನ್ನು ಸಮಾಶ್ರಯಿಸಿ, ಮಾರನು ಸೋತು ಜೈಲಿಗೆ ತೆರಳುವಲ್ಲಿಗೆ ಈ ಕಾಮಿಕ್ ಸೀನುಗಳು ಮುಗಿಯುವುವು.

ಮಾರನು, ಮಾರಿಯನ್ನು ದೂರದಿಂದ ನೋಡಿದಾಗ ಅವಳು ಮುಖ ತಿರುಗಿಸಿಕೊಳ್ಳಲು, "ನೀರೇಜ ಗಂಧಿಯ ಮುಖ" ಎಂಬಂತೆ, "ನೀರುಳ್ಳಿ ಗಂಧಿಯ ಮುಖ ನೀರಿನಲ್ಲಿ ತೊಳೆವೂ ಮಾರಿಯೇ ತೋರು ಬೇಗನೆ" ಎಂಬ ಹಾಡೂ; ಮಾರಿಯು ತನ್ನ ಹಟ್ಟಿಯ "ಜನಲಿ" ನಲ್ಲಿ ಮಾರನು

ನೋಡುವಂತೆ ನಿಂತು ತನ್ನ ನೀಳವಾದ ತಲೆಗೂದಲನ್ನು ಎಣ್ಣೆಹಚ್ಚಿ ಹೊಳೆಯುವಂತಾಗಿಸಿ ಮರದ "ಶಿಕ್ಕಟ್ಟಿಗೆ" ಯಿಂದ ಸಿಕ್ಕುಬಿಡಿಸುತ್ತ ಬಾಚುತ್ತ, ಶಿಕ್ಕಟ್ಟಿಗೆಯ ಹಲ್ಲಿನ ನಡುವೆ ಸಿಕ್ಕಿ ಈಚೆಗೆ ಹರಿಯುತ್ತಿರುವ ಹೇನುಗಳನ್ನು ಕುಟುಕಿ ಸಾಯಿಸುತ್ತಿರುವದನ್ನೂ ಕೆಲವು ಹೇನುಗಳು ತಪ್ಪಿಸಿ ಕೊಂಡು ಕಿವಿಗಳ ಕಡೆ ಹರಿಯುತ್ತಿರುವುದನ್ನು ಮಾರಿಯು ಕೈಗಳಿಂದ ಬಾಚಿ ಹಿಡಿಕಿ ಕೊಂದು ಎಸೆಯುವುದನ್ನೂ ನೋಡುತ್ತ ನೋಡುತ್ತ ಮಾರನು ಭಾವಾವೇಶಪೂರಿತನಾಗಿ ಅವಳನ್ನು ಬಣ್ಣಿಸುತ್ತ ಹಾಡುವ ಧಾಟಿಯೋ ಒಂದು ಹಾಸ್ಯರಸಘಟ್ಟಿಯ ಸನ್ನಿವೇಶ. ಇವು ಕಂದಗಳಲ್ಲಿದೆ.

ಆ ಹಾಡಿನ ಧಾಟಿ, "ಮನ್ಮಥ ವಿಜಯ" ದ್ದು– ತಪಸ್ಸಿನಲ್ಲಿ ನಿರತನಾದ ಮುಕ್ಕಣ್ಣನನ್ನು ಮನ್ಮಥ ನೋಡಿ ವರ್ಣಿಸುವ "ಕರಣ ವ್ಯಾಪಾರ ಸಂಗಂ" ಎಂದು ಮೊದಲಾಗಿ ಅವನ ಮೇಲೆ ಶರವೆಸೆಯುವವರೆಗೆ ಇರುವಷ್ಟು ಉದ್ದ ಇದೆ. ಅದನ್ನಿನ್ನೂ ಶೇಖರಿಸಬೇಕಾಗಿದೆ ಆಗ ಕೈಲಾಸಂ ಜೊತೆಗಿದ್ದು ಇದನ್ನೆಲ್ಲ ಕೇಳಿದವರಿಂದ.

ಈ ಸೀನು ಮುಂದೆ Romeo and Juliet ಅಥವಾ ವರದಾಚಾರ್ಯರ ಕಂಪೆನಿಯ ರಾಮವರ್ಮ ಲೀಲಾವತಿಯುಲ್ಲಿನ balcony scene ಆಗಿ cut scene ಆಗುತ್ತದೆ. ಅಲ್ಲಿ ಜನಲು ಮೇಲಕ್ಕೇರಿದೆ – ಅದರ ಗೋಡೆಗೆ 3–4 ಅಡಿ ದೂರದಲ್ಲಿ ಪೊದೆ ಇದೆ – ಆ ಪೊದೆಯ ಮೇಲೆ ಹತ್ತಿ balcony scene ಮಾಡಲು ಹೋಗಿ ಮಾರ ಕೆಳಗೆ ಬಿದ್ದು ಹಾಗೂ ಮೀಸೆಯು ಮಣ್ಣಾಗಲಿಲ್ಲವೆಂದು, ಮೀಸೆಯನ್ನು ಕೊಡವಿ ಹುರಿಮಾಡಿ, ಮೇಲೆ ಹತ್ತು ವುದಕ್ಕೆ ಬದಲಾಗಿ ಬೇಲಿಯನ್ನು ಬಿಡಿಸಿ ದೊಡ್ಡ ತೂತುಮಾಡಿ ಅದರಲ್ಲಿ ದೂರಿ ಜನಲಿನ ಹತ್ತಿರ ಹೋಗಿ ನಿಲ್ಲಲು, ಮಾರಿಯು ಹಾಡುವಳು.

(ಧಾಟಿ : ದೂರಲಹುದೇ ನೀರೆಯೆ ಈ ರೀತಿಯೊಳೆ)

ದೂರಲಹುದೇ ಮಾರನೆ ಈ ರೀತಿಯೊಳೆ ?
ಬೋರನು ಎನ್ನಂಗವ ಕ್ರೂರಂಬಿನಿಂ ಸಂತಾಪಿಸೆ ।
ಬೋರನು ಎನ್ನಂಗವ ಪೊರಕೆಯಿಂ ಸಂತಾಡಿರೆ ।
ಬೋರನು ಎನ್ನಂಗವ ಸೋಕೀಸಿಯೆ ಮಾತಾಡಿರೆ ।

ನೀನಾಗಳೇ ಮೋ  ಓಸದಿಂ ಬಳಿ ಸಾರುತೆ (ಬೀಳುತ್ತಲೇ
ಏಳುತ್ತಲೇ)  ಮಾರನೇ  ಈ ರೀತಿಯೊಳೆ
ದೂರಲಹುದೇ ಮಾರನೆ ಈ ಬೇಲೀಯೊಳೆ

*    *    *    *

ಅಷ್ಟು ಹೊತ್ತಿಗೆ ಬೋರನು ತನ್ನ ಆಪ್ತಮಿತ್ರನಾದ ಬೀರನೊಡನೆ ಪೋಲೀಸರನ್ನು ಕರೆದುಕೊಂಡು ಬಂದು ತನ್ನ fiancee ಮಾರಿಯನ್ನು ಮಾರನು ತೊಂದರೆ ಮಾಡುತ್ತಿರುವನೆಂದು complaint ಕೊಡಲು, ಪೋಲೀಸರು ಮಾರನಿಗೆ ಕೈಗಳಿಗೆ ಬೇಡಿ ತೊಡಿಸಿ ಎಳೆದೊಯ್ಯುವ ಸನ್ನಿವೇಶ, ಹಾಗೆ ಎಳೆದೊಯ್ಯುವಾಗ ಮಾರಿಯನ್ನು ನೋಡಿ, "ನಾಗವೇಣಿ ಮಾರಿಯೇ ನಾಂ ಪೋಗಿ ಬರುವೆನೇ—ಅರಸುತನದ ಕಾರ್ಯವೆನ್ನ ತ್ವರಿತಗೋಳಿಪುದೂ" ಎಂದು ಹಾಡಿ (ಬೇಡಿ ಹಾಕಿದ ಕೈತೋರಿಸುತ್ತ) ಅನಂತರ ಕಂದದಲ್ಲಿ, "ಮಾರಂ ಪದಿನಾಲ್ಕು ಮಾಸಂ ದೊರೆಯ ಮನೆಗೆ (ಜೈಲಿಗೆ) ಪೋಪಂ" **(14 months)** ಎಂದು ಸಾವೇರಿ ರಾಗದಲ್ಲಿ ಹಣೆ ಬಾಯಿ ಬಡಿದುಕೊಳ್ಳುತ್ತಾ ಮಾರಿಯನ್ನು ತಿರುತಿರುಗಿ ನೋಡುತ್ತಾ ಹೋಗುವಲ್ಲಿಗೆ 'ಮಟ್ಟುಗಳಿಗೆ ಮಟ್ಟು' ವೆಂಬ ನಾಟಕ ಪೂರ್ತಿಯಾಗುವುದು].

ಈ "ಶಂಬರನ ಶೃಂಗಾರ" ನಂಜನಗೂಡಿನ ರಂಗಮಂದಿರದಲ್ಲೆರಡು ಅಂಕಗಳೂ, ದಂಟಿನಸೊಪ್ಪಿನ ಸೀನೂ ಮಾತ್ರ ಹಸ್ತಪ್ರತಿಗೆ ಇಳಿದಿತ್ತು. ಅನಂತರ ಇದು ಎಲ್ಲೂ ಪ್ರದರ್ಶಿತವಾಗದಿದ್ದರೂ, ಕೈಲಾಸಂ "ಕೂತ ಕಡೆ ಕಂಪೆನಿ" ಗಳಲ್ಲಿ ಸ್ವಲ್ಪ ಸ್ವಲ್ಪ ರಚನೆಯಲ್ಲಿ ಮುಂದುವರೆಯಿತು. ಆದರೆ ಅವರು ತೀರಿಕೊಳ್ಳುವವರೆಗೂ ಪೂರ್ತಿಯಾಗಲೂ ಇಲ್ಲ. ಹಸ್ತ ಪ್ರತಿಗಿಳಿಯಲೂ ಇಲ್ಲ. ಅವರು ಸತ್ತ ೫ ವರ್ಷದ ಮೇಲೆ ಇದನ್ನು ಜ್ಞಾಪಕ ವಿದ್ದಷ್ಟು ಗುರುತು ಹಾಕಿ ಒಂದು ಹದಕ್ಕೆ ತರಲಾಯಿತು. ಇದೂ ಅಪೂರ್ಣವೇ ಮತ್ತು patchy ಆಗಿಯೇ ಉಳಿದಿದೆ. ಇದಕ್ಕೆ ಇನ್ನೂ ಕೆಲವು ಕಂದ, ಹಾಡೂ ಅವರ ಅಪಘ್ರ್ರತ ಕೇಳಿದವರು ಎಲ್ಲೆಲ್ಲಿದ್ದಾರೆಂದು ಹುಡುಕಿ ಅವರಿಂದ ಆ lines ತೆಗೆದುಕೊಂಡು ಪೂರ್ತಿ ಮಾಡಿದರೆ,

"ಶಂಬರನ ಶೃಂಗಾರ" stage ಮಾಡಬಹುದಾದ ಮಟ್ಟಕ್ಕೆ ಬಂದೀತು. ಅಲ್ಲಿಯವರೆಗೆ ಕೈಲಾಸಂ ಪದೇ ಪದೇ ಹೇಳುತ್ತಿದ್ದಂತೆ "let us truly be thankful for what we have received" ಎನ್ನುವುದಷ್ಟೇ ಸಮಾಧಾನ.

(ಇದರಲ್ಲಿರುವ ಹಾಡು ಕಂದಗಳನ್ನು ಕೈಲಾಸಂ ಪ್ರೇಮಿಗಳಾದ ಹೆಚ್. ಎಸ್. ವೆಂಕಟಸುಬ್ಬಯ್ಯ, ಇ. ಆರ್. ಸೇತೂರಾಂ, ಬಿ. ವಿ. ಕೃಷ್ಣಶಾಸ್ತ್ರಿ (ಮುರಲಿ) ಇವರುಗಳು ಇನ್ನೂ ಕುರುಕಂತ್ತಿರುತ್ತಾರೆ)



# ಕೈಲಾಸಂ — ಒಂದು ನೆನಪು

**ಎಚ್. ವಿ. ವೆಂಕಟಸುಬ್ಬಯ್ಯ**

ಓದದ ಬಾಯಲ್ ಅಮೃತಾನ್ನವ
ಮೋದದ ಬಾಯಲ್ ಸಜ್ಜನರ್ಕಳಂ ಪ್ರಿಯದಿಂದಂ ।
ಆದರಿಸದ ಬಾಯಲ್ ಅದು ತಾಂ
ಮೇದಿನಿಯೊಳ್ **very bad boy** ಚೂಡಾರತ್ನಾ ॥

ಈ ಮಾದರಿಯ ಹಾಸ್ಯದ ಚಟಾಕಿಗಳನ್ನ ನಿರಾಯಾಸವಾಗಿ ನಿರರ್ಗಲವಾಗಿ ಹಾರಿಸುತ್ತಿದ್ದ "ಕೈ" ಈಗ ನಮ್ಮೊಡನೆ ಇಲ್ಲ. ಹಾರ್ಮೋನಿಯಮ್ಮಿನ ಎರಡನೇ octave ನ ಶೃತಿಗೆ ಸೇರಿ ಲೀಲಾಜಾಲವಾಗಿ ನುಡಿಯುತ್ತಿದ್ದ ಆ ಸತ್ವಪೂರ್ಣವಾದ "ಧ್ವನಿ"ಯ ಸೊಗಸು ನಮಗೆ ಈಗ ಲಭ್ಯವಿಲ್ಲ. ಹಿಂದೆ

ಕೇಳಿದ ಅವರ ಮಾತುಗಳನ್ನೂ ಜೋಕುಗಳನ್ನೂ ಹಾಡುಗಳನ್ನೂ ಈಗ ಮೆಲುಕುಹಾಕುವುದೇ ನೆನಪಿಗೆ ಒಂದು ಹಬ್ಬ ! (A nostalgic treat).

ಕೈಲಾಸಂ ಮೈಸೂರಿಗೆ ಭೇಟಿಕೊಡುವುದಕ್ಕೆ ಮೊದಲು ಅವರ ನಾಟಕಗಳನ್ನು ಕೆಲವರು ಮೈಸೂರಿನಲ್ಲಿ ಪ್ರದರ್ಶಿಸಿದ್ದರು. ಪ್ರದರ್ಶನಗಳು ಚೆನ್ನಾಗಿಯೇ ನಡೆದುವು. ನಾಟಕ ಆಡಿದ ಕೆಲವರಿಗೆ ಸ್ವಲ್ಪ ತಲೆ ತಿರುಗಿತೋ ಏನೋ. "We have made Kailasam famous" ಅಂತ ಹೇಳಿಕೊಳ್ಳುತ್ತಾ ಬಂದರು. ಕ್ರಮೇಣ ಈ ಮಾತುಗಳು ಕೈಲಾಸಂ ಕಿವಿಗೂ ಬಿತ್ತು. ಅವರು ಈ ವಿಷಯದಲ್ಲಿ ಬಹಳ ಬೇಜಾರುಪಟ್ಟುಕೊಂಡಿದ್ದರು. ಇದಾದ ಕೆಲವು ದಿನಗಳಾದ ಮೇಲೆ ಕೈಲಾಸಂ ಅವರ ಇಂಗ್ಲಿಷ್ ನಾಟಕಗಳ "ಏಕ ಪಾತ್ರಾಭಿನಯ" ಮೈಸೂರಿನಲ್ಲಿ ನಡೆಯಿತು. ಆ ನಾಟಕಗಳಲ್ಲಿ ಅವರ ಮಾತನ್ನೂ ಅಭಿನಯವನ್ನೂ ಮೈಸೂರಿನ ಜನತೆ ಒಕ್ಕೊರಲಿನಿಂದ ಹೊಗಳಿ, "He is a genius. I say!" ಅಂತ ಹೇಳುತ್ತಾ ಬಂದರು. "ಏಕಪಾತ್ರಾಭಿನಯ" ಮುಗಿದು ಸುಮಾರು ಒಂದು ವಾರವಾಗಿರಬಹುದು—ಒಂದು ದಿನ ಸಾಯಂಕಾಲದ ಗೋಷ್ಠಿ ಕಾಲೇಜಿನ ಪಶ್ಚಿಮದಲ್ಲಿ, B. A. Hall ಮೆಟ್ಟಲುಗಳ ಪಕ್ಕದ ಜಗಲಿಮೇಲೆ ಸೇರಿತ್ತು. ಯಾರೋ ಒಬ್ಬರು ಕೈಲಾಸಂಗೆ ಹೇಳಿದರು, "ಸಾರ್ ಮೊನ್ನೆ ನಿಮ್ಮ "Karna" "Ekalavya"ದ acting ನೋಡಿ ನಿಮ್ಮನ್ನ "famous" ಮಾಡಿದವರೆಲ್ಲ ಢಂಗಾದರು "ಅಂತ. ಅದಕ್ಕೆ "ಕೈ"ಹೇಳಿದರು, "ಬರೀ 'ಢಂಗ್' ಅಲ್ಲ ಮಗೂ.. cow-dung ಆದರೂ ಅನ್ನು" ಅಂತ !

*        *        *        *

ಮೈಸೂರಿನಲ್ಲಿ ಸುಮಾರು ಫೆಬ್ರುವರಿ 44 ರಲ್ಲಿ ಒಂದು "ವಿವಿಧ ವಿನೋದಾವಳಿ" (ವಿನೋದಹಾವಳಿ) ನಡೆಯಿತು. Kailasam in every turn! ಅದಕ್ಕಾಗಿ print ಮಾಡಿಸಿದ hand bill ಒಂದು ಅಪೂರ್ವ document. ಅದರಲ್ಲಿ ಜಾಹೀರಾತಿನ ತಂತ್ರದ ಸೊಬಗನ್ನು ಗಮನಿಸಬಹುದು. ಅದನ್ನ "ಕೈ" ಅವರೇ ಪೂರ್ತಿಯಾಗಿ draft ಮಾಡಿದ್ದರು. ಅದನ್ನ ಇಲ್ಲಿ reproduce ಮಾಡಲಾಗಿದೆ.

ನೋಡುವಿರಿ ! ಬಾರದು ! ನೀವು ! ಕೋರುವೆವು ! ಹಾರೈಸುವು ! ನಾವ್ !

# ಏನನ್ನು? :

## ಮಹಾ ಪ್ರಭುಗ್ಳೂ

ಅಲ್ಲದೆ

## ವೈಸ್‌ರಾಯ್‌ಗ್ಳೂ

ಅಲ್ಲಲ್ಲದೆ

## ಸಾರ್ವಭೌಮ ಸಮ್ರಾಟರೂ

ನೋಡುವುದಕ್ಕೆ ಮುಂಚೆಯೇ

ಘನ್ನ ನಾಟಕವನ್ನು

ನಿಮ್ಮ ಮನಾರಿ ಅದಿ ಮೊದಲಿಂದ ಅರ್ಹತೆಯನ್ನು ಸಂಪಾದಿಸಲೋಸುಗ

ವಂಗರಾಜ್ಯದ **ಸೈಗಾಲ್**

ಪುಣೆಯ **ಶಾಂತಾ**

"ಶನ್ನೈ"ಯ **ಸುಬ್ಬಲಕ್ಷ್ಮಿ**

ಇತ್ಯಾದಿಗ್ಳ

ಕಣಾಯು ( ಸಂಪರ್ಕ ) ವಿಲ್ಲದೇಯೇ ನಮ್ಮ ನಿಮ್ಮ "ಅರ್ಥ" ಸಂಬಂಧವನ್ನು

ತಾ|| ೧೩-೨-೪೪ನೇ ಭಾನುವಾರ

ಸಂಜೆ ೭-೩೦ ರಿಂದ ರಾತ್ರೆ ೧೦ರ ವರಿಗೆ

ಇಲ್ಲಿ ಬೆಳೆಸುತ್ತೇವೆ.

ಇಂಥಾ ಪ್ರದರ್ಶನವನ್ನು ಹಿಂದೆಂದೂ ನೋಡಿರಲಾರಿರಿ.

ಚಪ್ಪರದ ಖರ್ಚು ಏಳದಿದ್ದರೆ

ಮುಂದೆ ಯಾವಾಗಲೂ ನೋಡಲಾರಿರಿ.

## ಷರಾರತ್ತುಗಳು :

೧ ಚನ್ನಾಗಿಲ್ಲದಿದ್ದ್ರೆ ಕಾಸು ವಾಪಸ್ !
ಆದುದರಿಂದ ಪಾಮಪ್ಲ್ಯಾಟುಗಳನ್ನು ತರ್ಬೇಡಿ !

೨ ಬಾಟ್ಲ್ಯಾ ವಗೈರೆ ಯಥೇಷ್ಟವಾ ಸೇದಿರಿ :
ಆದರೋ ದಮ್ಮಿಟ್ಟ ತೊಟ್ಟುಗಳು ಕಕ್ಕಟ್ಟ ನೀಳವಾಗಿರುವಾಗಲೇ
ಅಲ್ಲಲ್ಲಿಟ್ಟಿರುವ ತೊಟ್ಟಿಗಳಲ್ಲಿ ಹಾಕಿರಿ.

೩ 'ಅಕ್ಬರ್' ಗೃಸ್ನು ಕಾಡಿಸಿದರೆ once more ಹಾಡಬೇಕು
ಹಾಡುವರು ಉಪಾಯ ! ಹೋಗ್ ಯಾರ್ !

೪ Gallery ಯಲ್ಲಿ ಮೂರ್ಛೆ ಹೋದವರನ್ನು ಸೋಫಾ ಸೀಟಿಗೆ ತಂದು
ಮಂಗಳಾರತಿ ಮಾಡುವ ಪದ್ಧತಿ ಇಲ್ಲ ಅವರು ಪೋಲೀಸ್ ಚಾರ್ಜಿಗೆ
ಗುರಿಯಾಗುವರು ಹೋಷ್ ಯಾರ್ !

೫ ಬೋಧಿಸ ಶಿಸುವಿಗೆ ಗಳಿಗೆಯ ಕಂಪ್ನಲ್ಲಿ Chloroform ಖರ್ಚು
ನಿಮ್ಮನಿಮ್ಮ !

ಬನ್ನಿರಿ ! ಬನ್ನಿರಿ !

ನೋಟೀಸಿನ ಬೆಲೆ ಬಿಡಿಗಾಸು
ನಿಮಗೆ ವರಾತ್ತು ಒಂದು ಬಟ್ಟೆ

ಇ. ಸ. ರಿ.
ಪ್ರುಟ ತಿರುಪಿ ಸಿದ್ದಿ



13-2-44

# A SOIREE!

## Sowcar G. K. D. Bharamiah's Rathnavali Theatre

KAILASAM in Every Turn!

**CURTAIN: 7-30 P.M.** **CARS: 10 P.M.**

**ITEMS:**

1 Invocation

2 ಕಣ್ಣ ನಲ್ಲೊಸ್ಸು ಕನಸು! Bhendre

3. ಪಡುವಿಹಾರದ ಬಲಿತ ಬಾಲಕಯರ - "ಜಕ್ಷನ" Song

4. ಅದ್ಭುತನವನ! - An Extravaganza

5. A Trio of Travesties:
   - (i) Tipperrary - ಟಿಪ್ಪಾರ್ರಿ
   - (ii) Constantinopole ಕೊಂಸ್ಟಂಕೆ ರಂಗ
   - (iii) Sir Harry Lauder's I Love a Lassie! — ನಲ್ಲೆ ನನ್ನ ಅಪರಂಜಿ

6. ಹೋಂ ರೂ ಲೂ!

7 Don't Cry! Little Girl! Don't Cry· Tableaux Movement

8. Excerpts from Hamlet & Macbeth.

INTERVAL

9. The Late Lamented Nobel-Laureate· Gurudev Dr Rabindranath Tagore's

**"MALINI"**

10. National Anthem

**TICKETS CLASSES A TO E**

Tax Inclu —

5-10-0. 3-6-0. 2-4-0. 1-2-0. 0-7-9.

M. S DEVANOOR.
*Organiser.*

ವಿವಿಧ ವಿನೋದಾವಳಿ ತಕ್ಕಮಟ್ಟಿಗೆ ಚೆನ್ನಾಗಿ ನಡೆಯಿತು. ನಿರೀಕ್ಷಿಸಿದಷ್ಟು ಯಶಸ್ವಿಯಾಗಲಿಲ್ಲ. ಕಾರಣ, ಪಾರ್ಟಿದಾರರಿಗೆ "practice" ಸಾಲದು collection ಏನೋ ಚೆನ್ನಾಗಿಯೇ ಆಯಿತು ಆಗಿನ ಕಾಲಕ್ಕೆ ಸಾವಿರದಷ್ಟು collection ಅಂದರೆ ಭರ್ಜರಿಯೇ ಆಯಿತು ಅನ್ನಬಹುದು. ಖರ್ಚೂ ಅದರುದ್ದಕ್ಕೂ ಇತ್ತು. Hotel bill ವಗೈರೆ ಖರ್ಚು ಕಳೆದು substantial ಆಗಿ ಏನೂ ಉಳಿಯಲಿಲ್ಲ ಅಂತ ನನಗೆ ಜ್ಞಾಪಕ ಉಳಿದ ಹಣದಲ್ಲಿ ನಾಟಕಕ್ಕೆ ಬೇಕಾಗುವ Curtain. Dress ಕೊಂಡು ಶೇಖರಿಸಬೇಕು ಅಂತ ಉದ್ದೇಶವಿತ್ತು. ಹಣದ ಅಭಾವದಿಂದ ಏನೂ ಆಗಲಿಲ್ಲ. ಒಂದುದಿನ ಕೈಲಾಸಂಗೆ ಯಾರೋ ಹೇಳಿದರು "ಸಾರ್ ನೀವು ಒಂದು rug ಓ ಕೋಟಿನ ಬಟ್ಟೆಯೋ ತೆಗೆದುಕೊಳ್ಳಿ ಇರುವ ಸ್ವಲ್ಪ ಹಣ ಸುಮ್ಮನೆ ಖರ್ಚಾಗುತ್ತೆ" ಅಂತ. ಕೈಲಾಸಂ ಒಪ್ಪಲಿಲ್ಲ. "ಅಯ್ಯಾ, ದಮ್ಮಯ್ಯ ನನಗೆ ಬಟ್ಟೆಬರೆ ಬೇಡ ನನಗೆ ಒಂದು ಪದಾರ್ಥ ಬೇಕು ನೀವು ತಂದುಕೊಟ್ಟರೆ ತಗೋತೀನಿ" ಅಂದರು "ಅದು ಏನು" ಅಂತ ಕೇಳಿದಾಗ, "ನನಗೆ ಒಂದು copy Kittel's Kannada to English dictionary ಬೇಕು" ಅಂದರು. ನನ್ನ ಗೆಳೆಯ ಕೃಷ್ಣಸ್ವಾಮಿ ಅಯ್ಯಂಗಾರ್ ಮೂರುದಿನ ಮೈಸೂರಿನ ಅಂಗಡಿಗಳನ್ನೆಲ್ಲಾ ಶೋಧಿಸಿ ಒಂದು ಕಿಗ್ಗಲುನಾಮ ಸಂವತ್ಸರದ shopsoiled copy "Kittel" ತಂದುಕೊಟ್ಟ. ಅದರ ಬೆಲೆ ಆಗ ಸುಮಾರು 10-11 ರೂ ಅಂತ ಜ್ಞಾಪಕ. ಕೈಲಾಸಂಗೆ ಆದ ಆನಂದ ಹೇಳತೀರದು. ಒಂದು ದಿನವೆಲ್ಲ ಕಣ್ಣಿಗೆ monocle ಹಾಕಿಕೊಂಡು dictionary ಯನ್ನು ತಿರುವಿಹಾಕಿದ್ದೂ ಹಾಕಿದ್ದೇ. 2–3 ದಿನಗಳಾದಮೇಲೆ ಇದ್ದಕ್ಕಿದ್ದ ಹಾಗೇ ಕೈಲಾಸಂ 'ಅಯ್ಯಾ ಕಕ್ಕಸು ಅನ್ನುವ ಶಬ್ದದ ಮೂಲವೇನು, ಹೇಳ್ರಯ್ಯಾ" ಅಂದರು ಕೆಲವರು "ಕರ್ಕಶ–ತತ್ಸಮ, ಕಕ್ಕಸ–ತದ್ಭವ" ಅಂದರು ಇನ್ನು ಕೆಲವರು 'ಗೊತ್ತಿಲ್ಲ' ಅಂದರು. ಕೈಲಾಸಂ "Kittel ತೆಗೀರೋ, ಅದ್ರಲ್ಲಿ ನೋಡಿ–ಕಕ್ಕಸು ಪದದ ಮೂಲ 'cac-hus' from 'Dutch' ಅಂತಿದೆ" ಅಂದರು ಎಲ್ಲರಿಗೂ ಆಶ್ಚರ್ಯವಾಯಿತು. ಕೈಲಾಸಂ, "ನೋಡ್ರಯ್ಯಾ ಆ ಜರ್ಮನ್ ಪಾದ್ರಿಯ ಕನ್ನಡ ಪಾಂಡಿತ್ಯ ಹೇಗಿದೆ ? ಎಷ್ಟು ಶ್ರಮವಹಿಸಿ ಆತ ಈ ವಿಷಯಗಳನ್ನೆಲ್ಲ

ಸಂಗ್ರಹಿಸಿದ್ದಾನೆ ! ನಾವು ಕನ್ನಡಿಗರು ಅವನಿಗೆ ಎಷ್ಟು ಋಣಿಗಳಾಗಿರಬೇಕು" ಎಂದು ಕಿಟ್ಟೆಲ್‌ನ್ನು ಭಕ್ತಿಪೂರ್ವಕವಾಗಿ ಸ್ಮರಿಸಿದರು.

ಬರೆಯದ "ಕೈ"

ಕೈಲಾಸಂ ನಾಟಕಗಳನ್ನು, ಪದ್ಯಗಳನ್ನು ಸಾಮಾನ್ಯವಾಗಿ ಇತರರ ಕೈಲಿ ಬರೆಸುತ್ತಿದ್ದರು. ಈ ವಿಷಯವನ್ನು ಪ್ರೊ. ಕೆ. ವಿ. ಅಯ್ಯರ್ ಅವರು ತಮ್ಮ ಪುಸ್ತಕದಲ್ಲಿ ಬಹಳ ಸ್ವಾರಸ್ಯವಾಗಿ ವರ್ಣಿಸಿದ್ದಾರೆ. ಮೈಸೂರಿನಲ್ಲಿಯೂ ಅವರ ಸಾಹಿತ್ಯಸೃಷ್ಟಿ ಅದೇ ರೀತಿಯದೇ—ಹೇಳಿ ಬರೆಸುವುದು. ರಾತ್ರಿ ಸುಮಾರು 8 ಗಂಟೆಗೆ ಒಂದು cold bath ತೊಗೊಂಡು ಕೈಲಾಸಂ ಸಿದ್ಧ ವಾಗುತ್ತಿದ್ದರು. ಒಂದು ಪಕ್ಕದಲ್ಲಿ ಬಾಟಲ್ ಇನ್ನೊಂದು ಪಕ್ಕದಲ್ಲಿ ಸಿಗರೇಟ್ ಪ್ಯಾಕುಗಳು. ಬರೆದುಕೊಳ್ಳುವುದಕ್ಕೆ ಯಾರಾದರೂ ಒಬ್ಬರನ್ನು ಮೊದಲೇ ಗೊತ್ತುಮಾಡುತ್ತಿದ್ದರು. ಮೊದಲು ಪೀಠಿಕೆ—ತಾವು ಬರೆಸುವ ನಾಟಕದ ವಸ್ತುವನ್ನು act ಮಾಡುತ್ತಾ ಹೇಳುತ್ತಿದ್ದರು. ಇದ್ದಕ್ಕಿದ್ದ ಹಾಗೆಯೇ ಸ್ಫೂರ್ತಿಬಂದು, "ಮಗೂ ಬರ್ಕೊ ಈಗ—ದೀಪ ಆರಿಸಿಬಿಡು—ಈ electric light ಕಣ್ಣನ್ನು hurt ಮಾಡುತ್ತೆ—I can't concentrate—ಆ ಹಣತೆಯನ್ನು ಹಚ್ಚಿಬಿಡು—ನನ್ನ ಮುಖಕ್ಕೆ ಬೆಳಕು ಬೀಳದಂತೆ ನೀನು ನನಗೂ ಹಣತೆಗೂ ಮಧ್ಯೆ ಕೂತ್ಕೋ" ಅಂತ ಹೇಳುತ್ತಿದ್ದರು. ಬರೆದು ಕೊಳ್ಳುವವನು ತನ್ನ ಮುಂದೆ ಹಣತೆ ಇಟ್ಟುಕೊಂಡು ಕೈಲಾಸಂ ಕಡೆಗೆ ಬೆನ್ನು ಮಾಡಿಕೊಂಡು ಕೂತುಕೊಳ್ಳಬೇಕು ಆಮೇಲೆ ಸರ್ರನೆ "ಸಿಗ್ರೇಟ್ ಆರಿ ಹೋಯಿತು ಆ ಹಣತೆಯನ್ನು ಇಲ್ಲಿ ಹಿಡಿ" ಅಂತ ಹೇಳಿ ಆ ದೀಪದಲ್ಲೇ ಸಿಗ್ರೇಟ್ ಹಚ್ಚಿ ಆಳವಾಗಿ ಒಂದು ದಮ್ ಎಳೆದು ನಿಧಾನವಾಗಿ ಹೊಗೆ ಬಿಡುತ್ತಾ "ಮಗೂ, ಈಗ time waste ಮಾಡಬಾರದು. ಇವತ್ತು ಏನಾದರೂ ಮಾಡಿ 'ಕರ್ಣ' ಎರಡು ಸೀನ್ ಮುಗಿಸಬೇಕು. ಅದೇನೋ ನೋಡು ಇದನ್ನ ಶುರುಮಾಡಿದ ದಿನದಿಂದ ಏನೇನೋ ತಕ್ರಾರ್ ಬರ್‍ತಾ ಇದೆ ಮುಗಿಸುಕ್ಕೇ ಆಗುಲ್ಲ" ಅಂತ ಹೇಳಿ ಕೆಲವು lineಗಳನ್ನ dictate ಮಾಡುತ್ತಿದ್ದರು. ಮಧ್ಯೆ ನಿಲ್ಲಿಸಿ, "ಮಗೂ, ಓದು, ಏನು ಬರ್ದೆ" ಅಂತ ಹೇಳಿ ಎಲ್ಲವನ್ನೂ ಓದಿಸಿ ಕೇಳಿ ಸರಿಯಾಗಿದ್ದರೆ "ಹೂಂ" ಅಂತ ತೃಪ್ತಿಯ ಗುಟುರು ಹಾಕುತ್ತಿದ್ದರು. ಬರೆಯುವವನು ಏನಾದರೂ spelling ತಪ್ಪು

ಮಾಡಿದ್ನೋ, ಅಥವಾ pronunciation ತಪ್ಪಿದ್ನೋ, ತೊಗೊಳ್ಳಿ ಅದರ ಮೇಲೆ ವ್ಯಾಖ್ಯಾನ ? 'Humble' ಅನ್ನುವುದನ್ನು ಹಂಬಲ್ ಅಂತ ಉಚ್ಚರಿಸಿದರೆ. "ಲೋ ಅದು 'ಅಂಬಲ್' ಕಣೋ, ಅಲ್ಲಿ 'H' ಅನ್ನೋದು ಹೆಚ್‌ಕಟ್ಟೆ ತಿಳ್ಕೋ ! " ಅಷ್ಟರಲ್ಲಿ ರೂಮಿಗೆ ಕಂಠಿ ಬಂದಾ ಅಂತ ಇಟ್ಕೊಳ್ಳೋಣ. ಅವನ್ನ "ಯಾಕೋ ಇಷ್ಟು late ಉ ? 11½ಗೇ ಬರ್ತೀನಿ ಅಂತ ಹೇಳಿದ್ಯಲ್ಲ? ಅಂತ ಕೇಳೋದು. ಅವನು "ಸಾರ್ ! ನಮ್ಮ ಪೇಪರಿನ ಕೆಲಸ ಸ್ವಲ್ಪ late ಆಯ್ತು" (He was working for a daily paper) ಅಂದರೆ ಪುನಃ "ನಿನ್ನ paper ಓ ? All 'ಪರ್' and no pay' ಅಂತ ಹಾಸ್ಯ ಮಾಡಿ "ಕೂತ್ಕೋ, ಇವತ್ತು ರಾಮು ಬರ್ಕೋತಾ ಇದಾನೆ. ನೀನು ಸುಮ್ನೆ ಕೇಳ್ತಾ ಇರು " ಅನ್ನುವುದು.

ಮುಂದೆ ಒಂದು ಕಡೆ night ಅನ್ನುವ ಪದ ಬರೆಯಬೇಕಾದಾಗ ಕೈಲಾಸಂ ಷ್‌ಷ್‌ಷ್ ಅಂತ ಸೀಟಿಹಾಕಿ, "ಲ್ರೋ light ಅನ್ನುವುದರ scotch pronunciation ಗೊತ್ತೇನ್ರೋ ? ಇಂಗ್ಲಿಷಿನವನು 'ಲೈಟ್' ಅಂತ ಉಚ್ಚರಿಸಿದರೆ scotsman ಅದನ್ನೇ ಲಹ್‌ಕ್ಟ್ ಅಂತಾನೆ. "It was ನಹ್‌ಕ್ಟ್ and there was ಬ್ರಹ್‌ಕ್ಟ್ ಮೂನ್ ಲಹ್‌ಕ್ಟ್" ಅನ್ನುತ್ತಾನೆ ಹೀಗೇ ಮಾತುಗಳ ಮುಂದುವರಿಕೆ. ಒಂದೇ ಎರಡೇ ?

ಹೀಗಾಗಿ 12 ಗಂಟೆ ಹೊತ್ತಿಗೆ 8–10 line ಕೂಡಾ ಮುಗಿಯುತ್ತಿರಲಿಲ್ಲ. ಬರೆದುಕೊಳ್ಳುವವನಿಗೆ ತೂಕಡಿಕೆ–ಕೈಲಾಸಂಗೆ ಆ time ನಲ್ಲಿ full ಸ್ಫೂರ್ತಿ ! ರೂಮಿನಲ್ಲಿ ಬೇರೆ ಯಾರಾದರೂ ಇದ್ದರೆ joke ಗಳು ಶುರುವಾಗಿ ನಾಟಕದ ವಿಷಯವೇ ಎಲ್ಲರಿಗೂ ಮರೆತುಹೋಗುತ್ತಿತ್ತು. ಬರೆದುಕೊಳ್ಳುವವನು "ಸಾರ್, ಮನೆಗೆ ಹೋಗ್ತೀನಿ. ನಾಳೆ ಬೇಗ ಏಳಬೇಕು. ನಾಳೆ ಸಾಯಂಕಾಲ ಮುಂಚೆ ಬರ್ತೀನಿ. ಬೇಗ ಎಲ್ಲಾ ಬರೆದು ಮುಗಿಸೋಣ " ಎಂದರೆ. "ಮಗೂ ಇನ್ನೊಂದು cheerioh ಹೇಳಿ ಬಿಟ್ಟು ಹೋಗು ' ಅಂತ ಇನ್ನೊಂದು ಅರ್ಧಗಂಟೆ (ಮತ್ತೊಂದು ಗುಟುಕು drink ಹಾಕುವವರೆಗೂ) ಅವನನ್ನ ಕೂರಿಸಿ ಆಮೇಲೆ ಇಷ್ಟವಿಲ್ಲದೇ ಮನೆಗೆ ಹೋಗಲು ಅನುಮತಿ ಕೊಡುತ್ತಿದ್ದರು. ಹೀಗಾಗಿ ಕಾಳಮ್ಮನ ಹೈಕ್ಳು, ಬೆಂಕಿ ಬಸವ್ವ ಮುಂತಾದ ಅನೇಕ ಕೃತಿಗಳು ಬೆಳಕಿಗೆ ಬರಲೇ ಇಲ್ಲ.

**ಕೈಲಾಸಂ "ವಿದೂಷಕ'**

ಕೈಲಾಸಂ ರಚಿಸಿರುವ ಪಾತ್ರಗಳಲ್ಲಿ ಅವರ "ವಿದೂಷಕ" ಅತ್ಯಂತ loveable fellow. ಪೌರಾಣಿಕ ನಾಟಕಗಳಲ್ಲಿ ಎಲ್ಲೆಲ್ಲಿ ಸ್ವಯಂವರ ಬರುವದೋ ಅಲ್ಲೆಲ್ಲ ಅವನು invariable ಆಗಿ ಹಾಜರ್. ಅವನು "ನಿತ್ಯ ಅವಿವಾಹಿತ ಯಾಕೆಂದರೆ ಯಾವ ರಾಜಕುಮಾರಿಯೂ ಇವನನ್ನ ಮೋಹಿಸುವುದಿಲ್ಲ. ಆದರೆ ಅವನು ಯಾವಾಗಲೂ ರಾಜಕುಮಾರಿಯನ್ನೇ ಮದುವೆಯಾಗಲು ಸಂಚು ಹಾಕುತ್ತಾ ಇರುವವನು. ಅವನಿಗೆ ಅದರ ಕಡಿಮೆ grade ಹೆಣ್ಣು ಬೇಡ. ಅವನು incurable optimist ನೂರು ಸ್ವಯಂವರಗಳಲ್ಲಿ fail ಆದ್ರೂ ನೂರ ಒಂದನೇಯದರಲ್ಲಿ success guarantee ಅಂತ ಖುಷಿಯಾಗಿ ಹೊರಡತಕ್ಕವನು [ನಮ್ಮ lottery addicts ಮತ್ತು racegoers ಜ್ಞಾಪಕಕ್ಕೆ ಬರ್ತಾರೆ !] ಅವನಿಗೆ ಜೋಪು ಮೀಸೆ ಮತ್ತು ಬಣ್ಣದ ಗಾಜಿನ ಕನ್ನಡಕ ಇದ್ದೇ ಇರಬೇಕು. ಸ್ವಯಂವರದ scene ಗೆ ಮುಂಚೆ street scene ನಲ್ಲಿ stage ಗೆಲ್ಲ ಒಬ್ಬನೇ ಮೀಸೆ ತಿರುವುತ್ತಾ ಬರ್ತಾನೆ. ತನ್ನ ಹಾವಭಾವ ವಿಲಾಸ ವಿಭ್ರಮಗಳಿಂದ ಹೇಗೆ ರಾಜಕುಮಾರಿಯನ್ನು ಗೆಲ್ಲುತ್ತೇನೆಂದು mischievous ಆಗಿ ಒಂದು ಕಣ್ಣು ಮಿಟುಕಿಸುತ್ತಾ ಹಾಡುತ್ತಾನೆ :-

ರಾಗ : ಹಿಂದೂಸ್ಥಾನಿ ಭೈರವಿ

ನೀರಜೆಯು ಕಂಡಾಗಾ
ಪಟ್ಟದ್ದುರುಷ ಗೊಂಡೂಊ
ಹಾರವಕ್ಕೆಗೊಂಡು
ಕಕ್ಕಕ್ಕರವ ಪಿಡಿದೂ
ಹಿಂಡೂವ ನೋಡಿರೀ
ರಾಜಸಭೆಯಲೀ ಹೊಳೆಯುತ ಥಳಥಳನೆ
ರಾಜಕುವರಿಯು ನಗಿಸುತ ಘೊಳಘೊಳನೆ
ಕರೆದೊಯ್ಯುವೆ ನಾನಿವಳನು ಕಳ್‌ಕಳ್‌ನೆ
ಉಳಿದರಸರ ಗತಿ ಅಳುವುದೆ ಗೊಳೋಗೊಳನೆ
ನೀರಜೆಯು

ಮುಂದೆ ಸ್ವಯಂವರ ನಡೆಯುತ್ತೆ. We know the result. Race ನಲ್ಲಿ ನಮ್ಮ ವಿದೂಷಕ "also ran" ಆಗುತ್ತಾನೆ. ಅವನ ಪಾತ್ರದ beauty ಅಂದರೆ ಅವನು ಸ್ವಲ್ಪವಾದರೂ ಧೃತಿಗೆಡುವುದಿಲ್ಲ. ಖುಷಿಯಾಗಿಯೇ ಇರ್ತಾನೆ. next scene ನಲ್ಲಿ ಬಂದು, "ಬರುವ ಸಂವತ್ಸರದಲ್ಲಿ ಕೋಸಲ ರಾಜ್ಯದಲ್ಲಿ ಸ್ವಯಂವರ ಮಹೋತ್ಸವ ನಡೆಯಲಿದೆ ಅಲ್ಲಿಗೆ ಹೋಗಿ" "ನೀರಜೆಯ ಕಂಡು— ಒಂದಷ್ಟು ನೋಡಿರೀ" ಅಂತ ಹೇಳುತ್ತಾನೆ

ನಿರ್ಗಮಿಸುವ ಮೊದಲು ರಾಜನಿಗೆ ಕಲ್ಯಾಣಮಸ್ತು ಎಂದು ಆಶೀರ್ವದಿಸಿ, ಪುನಃ ನಿಧಾನವಾಗಿ ಕಲ್ಯಾಣ–ಮಸ್ತು ಎಂದು ಬಿಡಿಸಿ ಹೇಳಿ, 'ಮಸ್ತು' ಎನ್ನುವುದಕ್ಕೆ "ತುಂಬಾ" ಎಂದು ಅರ್ಥವಾಗುವ ಹಾಗೆ ಕೈಗಳನ್ನು ಅಗಲಿಸಿ ಅಭಿನಯಿಸುತ್ತಾನೆ.

"ನೀರಜೆಯ ಕಂಡು" ಕೈಲಾಸಂಗೆ ಬಹಳ ಪ್ರಿಯವಾದ ಹಾಡು. ಅವರು ಒಬ್ಬರೇ ರೂಂನಲ್ಲಿ ಇದ್ದಾಗ ಹಾರ್ಮೋನಿಯಂ ಬಾರಿಸಿಕೊಂಡು ತಾರ ಸ್ಥಾಯಿಯಲ್ಲಿ ಈ ಹಾಡು ಹೇಳಿಕೊಳ್ಳುತ್ತಿದ್ದದ್ದನ್ನು ನಾನು 3–4 ಬಾರಿ ಹೊರಗೆ ನಿಂತು ಕೇಳಿದ್ದೀನಿ. ಇದರಲ್ಲಿ ಒಂದೂಸ್ಥಾನಿ ಭೈರವಿಯ ರಾಗಭಾವ ತುಂಬಾ ಸೊಗಸಾಗಿ ಮೂಡಿದೆ. ಅದರಲ್ಲೂ ಕೈಲಾಸಂ ಸತ್ವಪೂರ್ಣ ಧ್ವನಿಯಲ್ಲಿ (ಅದರಲ್ಲಿ ತಾರಸ್ಥಾಯಿಯಲ್ಲಿ) ಇದನ್ನು ಹೇಳುತ್ತಿದ್ದರೆ ಕೇಳುವುದು ಒಂದು ಭಾಗ್ಯ! ಅವರು ಭಾವಪೂರ್ಣವಾಗಿ ಈ ರಾಗ ಹಾಡುವಾಗ ಕಣ್ಣಲ್ಲಿ ನೀರು ಸುರಿಸುತ್ತಿದ್ದರು! ಕೇಳುವವರಿಗೂ ಭಾವ ಆವೇಶ ಬಂದು ಕಣ್ಣು ತೇವವಾಗುತ್ತಿದ್ದುದು ಅನಿವಾರ್ಯ.

**ಕೆರೆಯ ನೀರನು**

ಸಂಗೀತದ ಮೇಷ್ಟ್ರು ಒಂದನೇ ತಾರೀಖು ತಮ್ಮ ಸಂಭಾವನೆ ತೆಗೆದುಕೊಳ್ಳುವುದಕ್ಕೆ ಪಾಠದ ಮನೆಗೆ ಹೋದರಂತೆ. ಮನೆಯ ಯಜಮಾನಿತಿ ಹೇಳಿದಳಂತೆ," ಏನು ಮೇಷ್ಟ್ರೇ, ನಾಲ್ಕು ತಿಂಗಳಿಂದ ಮಗೂನ 'ಕೆರೆಯನೀರ'ಲ್ಲಿ ನಿಲ್ಲಿಸಿಬಿಟ್ಟಿದ್ದೀರ. ಈಗ ಅದಕ್ಕೆ ಚಳಿಜ್ವರ ಬಂದಿದೆ. ಇನ್ನೂ ಒಂದು ವಾರ ಪಾಠಬೇಡ !!"

### ಸಪ್ತಮಾತೃಕಾ ನಾಮಗಳು

ಬ್ರಾಹ್ಮೀ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಾ ಇವು ಸಪ್ತ ಮಾತೃಕೆಯರ ಹೆಸರುಗಳು. ಕೈಲಾಸಂ ಈ ಹೆಸರುಗಳನ್ನು ಸಪ್ತಸ್ವರಗಳಿಗೆ ಹೊಂದಿಸಿ ರಾಗವಾಗಿ ಹೇಳುತ್ತಿದ್ದರು—ಅಂದರೆ 'ಬ್ರಾಹ್ಮಿ' ನಾಮವನ್ನು ಷಡ್ಜದಲ್ಲೂ, ಮಾಹೇಶ್ವರಿ ನಾಮವನ್ನು ರಿಷಭದಲ್ಲೂ ಕೊನೆಗೆ ಚಾಮುಂಡಿಯ ನಾಮವನ್ನು ನಿಷಾದದಲ್ಲೂ ಮಧ್ಯೆ ಪ್ರತಿಯೊಂದು ಹೆಸರಿನ ಮುಂದೆಯೂ ಒಂದೊಂದು ವಿಶೇಷಣವನ್ನು ಸೇರಿಸುತ್ತಿದ್ದರು. ಇದರ ಪೂರ್ತಿ ಪಾಠ ನನಗೆ ಈಗ ನೆನಪಿಲ್ಲ. ಅವರು "ಸುಗುಣಸರಸಾ" ಅನ್ನುವ ತಮಿಳು ಟಾಕಿ ಚಿತ್ರದಲ್ಲಿ ನಟಿಸಿದ್ದರು. ಅದರಲ್ಲಿ ಅವರದು ಒಬ್ಬ hypocrite ಸಾಧುವಿನ ಪಾತ್ರ. ಅದರಲ್ಲಿ "ಬ್ರಾಹ್ಮೀ-ಮಾಹೇಶ್ವರಿ"ಯನ್ನು ಹಾಡಿದ್ದರು

### ಆಲ್ಸೇಸ್—ಲೊರೈಯಿನ್

ಒಂದು ಬಾರಿ ಏನೋ ಮಾತನಾಡುತ್ತಿರುವಾಗ (Alsatian dog—ವಿಷಯ ಅಂತ ಜ್ಞಾಪಕ) ಸರ್ರನೆ ಕೈಲಾಸಂ, "ಆಲ್ಸೇಸ್ ಎಲ್ಲಿದೆ ಗೊತ್ತೇನಯ್ಯಾ" ಅಂತ ಕೇಳಿದರು. ಅಲ್ಲೇ ಇದ್ದ ಕೃಷ್ಣಸ್ವಾಮಿ ಅಯ್ಯಂಗಾರ್ (ಅವನು ಜಾಗ್ರಫಿಯಲ್ಲಿ terribleಉ) "ಅದು ಫ್ರಾನ್ಸಿನಲ್ಲಿದೆ, ಸಾರ್" ಅಂದ [ಅದು I world war ಗೆ ಮುಂಚೆ Germany ಯ ಸ್ವಾಧೀನದಲ್ಲಿತ್ತಂತೆ. ಆಮೇಲೆ France ಗೆ ಸೇರಿತು. ಅಂತೂ rightly or wrongly ಕೈಲಾಸಂ thought it was in Germany— ಈಗ ಅದು ಎಲ್ಲಿತ್ತು ಅನ್ನುವುದು ಮುಖ್ಯವಲ್ಲ — ಕೈಲಾಸಂ ಜವಾಬು ಕೊಟ್ಟ ರೀತಿ ಮುಖ್ಯ]. ಕೈಲಾಸಂ ಹೇಳಿದರು, "ಹೇಗಯ್ಯಾ ಅದು France ನಲ್ಲಿರಲು ಸಾಧ್ಯ? ನಾನು ಅಲ್ಲೆಲ್ಲ ತಿರುಗಾಡಿದ್ದೀನಿ". ನಮ್ಮ ಅಯ್ಯಂಗಾರ್ ಬಿಡಲಿಲ್ಲ, ಏನೇನೋ ಅಥಾರಿಟಿ quote ಮಾಡಲು ಶುರುಮಾಡಿದ. ಕೈಲಾಸಂ ಕೊನೆಗೆ "ಹೋಗ್ಲಿ ಬಿಡು. It is in that part of France which always belonged to Germany" ಅಂತ ಮುಗಿಸಿದರು.

ಹಸಿರು Copper Sulphate

ಇನ್ನೊಂದು ಬಾರಿ ಕೈಲಾಸಂ ಒಬ್ಬ ದೊಡ್ಡಮನುಷ್ಯರ (ಅವರು too famous a man—ಅವರ ಹೆಸರು ಬೇಡ) ಸಂಗಡ ಮಾತಾಡುತ್ತ ಲಿದ್ದರಂತೆ. ಆ ದೊಡ್ಡಮನುಷ್ಯರು (either due to the slip of the tongue or due to real confusion) copper sulphate ಬಣ್ಣ "green" ಅಂತ ಹೇಳಿಬಿಟ್ಟರಂತೆ. ಕೈಲಾಸಂ ನಿಧಾನವಾಗಿ ಅವರಿಗೆ ಹೇಳಿದರಂತೆ, "If I may hazard to refresh your memory, Sir, copper sulphate always had that shade of green which is popularly known as 'blue' " ಅಂತ.

*　　*　　*　　*

ತುಂಬಾ ಹಿಂದಿನ ಮಾತು. ಕೈಲಾಸಂ ಮತ್ತು ಕೆಲವು ಗೆಳೆಯರು "Alibaba and forty thieves" ಚಲನಚಿತ್ರ ನೋಡಲು ಹೋದರಂತೆ. ಟಿಕೆಟ್ ವಿಂಡೋದಲ್ಲಿ ಒಂದು ನೋಟನ್ನು ಕೊಟ್ಟು ಎಂಟಾಣೇದು ಐದು ಟಿಕೆಟ್‌ಕೊಡಿ ಅಂತ ಕೇಳಿದರಂತೆ. ಅವನು ಎಂಟಾಣೆ ಟಿಕೆಟ್ 'close' ಅಂದ ನಂತೆ. ಹನ್ನೆರಡಾಣೆ ಟಿಕೆಟ್‌ಕೊಡು ಅಂದರಂತೆ. ಅದೇ ಕ್ಲೋಸ್ ಅಂತ ಉತ್ತರಬಂತು. ಹಾಗಾದರೆ ಒಂದು ರೂಪಾಯಿಂದು ಕೊಡು ಅಂದರಂತೆ. ಒಂದು ರುಪಾಯಿಂದೂ ಕ್ಲೋಸ್, ಒಂದೂವರೇದೂ ಕ್ಲೋಸ್, ಎರಡೂ ವರೇದು ಮಾತ್ರ ಕೆಲವು ಟಿಕೆಟ್‌ಗಳಿವೆ ಅಂದನಂತೆ. ಕೈಲಾಸಂ "ಹೋಗ್ಲಿ ಬಿಡು–ಬಾಕಿ ಮೂವತ್ತೊಂಬತ್ತು ಜನಾನ ನೋಡದೇ ಇದ್ರೆ ಪರವಾಗಿಲ್ಲ– ನನ್ನ ನೋಟು ವಾಪಸ್ ಕೊಡು" ಅಂತ ಕೇಳಿ ತೊಗೊಂಡು ಹಿಂದಿರುಗಿದರಂತೆ

ಇತಿ ನನ್ನಮರಃ

ಕೈಲಾಸಂ ಈ ಕೆಳಗೆ ಕಂಡ ಸಾಲುಗಳನ್ನು ಒಮ್ಮೆ ಹೇಳಿದ್ದರು :–

ಕಾನೀನಃಕನ್ಯಕಾಪುತ್ರಃ
ಕಪರ್ದೀ ಕರ್ಣ ಕ್ರೈಸ್ತ ಚ ॥ ಇತಿ, ನನ್ನಮರಃ

"ಇದು ನನ್ನ ಅಮರ ಕಣೋ. ಇದರ ಅರ್ಥ ಕನ್ಯಕಾ ಪುತ್ರರು ಮೂರು ಜನ. ಕಪರ್ದೀ, ಕರ್ಣ ಮತ್ತು ಕ್ರೈಸ್ತ".

ಕ್ರಿಸ್ತ, ಕರ್ಣರು ಕನ್ನಿಕಾಪುತ್ರರು ಅನ್ನುವುದಕ್ಕೆ ಆಧಾರಗಳಿವೆ. ಆದರೆ ಕಪರ್ದಿ (ಇದು ಈಶ್ವರನ ಹೆಸರು) ಹೇಗೆ ಕನ್ನಿಕಾಪುತ್ರ ಆದ ಅನ್ನುವುದು ಇದುವರೆಗೆ ನನಗೆ ಗೊತ್ತಾಗಿಲ್ಲ. [ಆಗಲೇ ಕೈಲಾಸಂನ ಈ ವಿಷಯ ಕೇಳಲಿಲ್ಲ] ಈಚೆಗೆ ನನಗೆ ತಿಳಿದ ಕೆಲವರು ಹಿರಿಯರನ್ನು ಈ ಬಗ್ಗೆ ವಿಚಾರಿಸಿದೆ. ಯಾರೂ ಇದುವರೆಗೆ ಸಮಾಧಾನ ಕೊಟ್ಟಿಲ್ಲ. ಕಪರ್ದಿ ಎಂದರೆ ವೇದವ್ಯಾಸರು ಅನ್ನುವ ಅರ್ಥವಿದ್ದರೆ ಆಗ ಆ ಪದ ಅರ್ಥಕ್ಕೆ ಸರಿಯಾಗಿ ಹೊಂದಿಕೊಳ್ಳುತ್ತದೆ. ಯಾಕೆಂದರೆ ವ್ಯಾಸರು ಕನ್ಯಕಾಪುತ್ರ ತಾನೇ. ಈ ವಿಷಯ ಯಾರಾದರೂ ತಿಳಿದವರು clarify ಮಾಡಿದರೆ ಅವರಿಗೆ ನಾನು ಋಣಿ.

## ಕೈಲಾಸಂ ಪ್ರಭಾವ

ಕೈಲಾಸಂ ಸಹವಾಸದಿಂದ ಅನೇಕ ತರುಣರಿಗೆ ಅವರ ಮಾದರಿಯ ಪ್ರಾಸಗಳು, pun ಗಳು ಇವುಗಳ ಹುಚ್ಚು ಹಿಡಿದಿತ್ತು. ಕೆಲವು samples ನೋಡಿ: - ನಮ್ಮ ಯುನಿವರ್ಸಿಟಿ ಯೂನಿಯನ್ನಿನ ಒಬ್ಬ ಸದಸ್ಯನ ವಿಷಯ ಜ್ಞಾಪಕಕ್ಕೆ ಬರುತ್ತೆ. ಆತ ಆಗ M. A. ವಿದ್ಯಾರ್ಥಿ. ಒಂದೆರಡು ಕೈಲಾಸಂ ನಾಟಕಗಳಲ್ಲಿ ಪಾತ್ರವಹಿಸಿದ್ದ. ಕಾಲೇಜ್ ಗರುಡಿಗೂ ಹೋಗುತ್ತಿದ್ದ. ಆ ಕಾಲದಲ್ಲಿ ಯೂನಿಯನ್ ರೆಸ್ಟೋರಾಂಟಿನಲ್ಲಿ ಒಂದು opinions book ಇಟ್ಟಿದ್ದರು. ಅದರಲ್ಲಿ ಆತ ಈ ರೀತಿ record ಮಾಡಿದ್ದ :—

ಸಂಧ್ಯಾಕಾಲದಲ್ಲಿ ಸಾಮು ಮಾಡಿ ಬರುವ ಸದಸ್ಯರಿಗೆ ಸರಬರಾಜು ಮಾಡುತ್ತಿರುವ ಸಾಮಾನುಗಳು ಸರ್ವೋತ್ಕೃಷ್ಟವಾಗಿವೆಯೆಂದು ಸೂಚಿಸಲು ಸಂತೋಷ—ಸಹಿ ಸುಬ್ರಹ್ಮಣ್ಯ.

*   *   *   *

ಗೆಳೆಯ ಇ. ಆರ್ ಶ್ರೀಕಂಠಯ್ಯನವರಿಗೆ ಊರಿನಲ್ಲಿ ಜಮೀನಿದೆ. ಅದು ಆಬಾದಾಗದೆ ಬಹಳ ವರ್ಷ ಹಾಗೇ ಇತ್ತು. ಅದನ್ನ ಹದಕ್ಕೆ ತರಬೇಕು ಅಂತ ಬೇಕಾದಷ್ಟು ಹಣ, ಕಾಲ ಎಲ್ಲವನ್ನೂ ವ್ಯಯಮಾಡಿದರು ಹೆಚ್ಚು ಪ್ರಯೋಜನವಾಗಲಿಲ್ಲ. ಒಂದುದಿನ ಜಮೀನಿನ ತೊಂದರೆಯನ್ನು ಹೇಳಿ

ಕೊಳ್ಳುತ್ತಾ ಹೀಗೆಂದರು, " ನಮ್ಮ ಜಮೀನು Ulysses ನಲ್ಲಿ ಬರುವ ಮಾತಿನ ಹಾಗೆ, ಸಾರ್ ! to strive, to seek, to find and not to yield"

ಈಗ ಸುಮಾರು 15 ವರ್ಷಗಳ ಹಿಂದೆ son of fury ಅನ್ನುವ ಇಂಗ್ಲಿಷ್ ಚಿತ್ರ ನಡೆಯುತ್ತಿದ್ದಾಗಿನ ಮಾತು. ಪ್ರಜಾವಾಣಿ ಆಫೀಸಿನಲ್ಲಿ ನಾವು ಮೂರುನಾಲ್ಕು ಜನ ಮಾತನಾಡುತ್ತಾ ಕುಳಿತಿದ್ದೆವು ಯಾರೋ ಒಬ್ಬರು sports sectionನ ಸೂರ್ಯನಾರಾಯಣರಾವ್ (ಸೂರಿ), ಅವರನ್ನ ತಮಾಷೆಯಾಗಿ ಚುಡಾಯಿಸುತ್ತಿದ್ದರು. ಪಕ್ಕದಲ್ಲಿದ್ದ Y. N. K. ಹೇಳಿದರು "Don't make fun of Suri-He will become the Son of Fury"

ಈಗ ಕೆಲವು ವರ್ಷಗಳ ಹಿಂದೆ ಬುದ್ಧ ಜಯಂತಿಯ 25ನೇ ಶತಮಾನೋತ್ಸವ ನಡೆದಾಗ ಸಾಹಿತ್ಯ ಪರಿಷತ್ತಿನ ಕಟ್ಟಡದಲ್ಲಿ ಅದರ ಸಂಬಂಧ ಅನೇಕ ಕಾರ್ಯ ಕ್ರಮಗಳು ನಡೆದುವು. ಒಂದು ದಿನ ಮಧ್ಯಾಹ್ನದ programme ನಲ್ಲಿ ಜನ ಕಿಕ್ಕಿರಿದು ನೆರೆದಿದ್ದರು. ಮೊದಲೇ ವೈಶಾಖಮಾಸ–ಮಧ್ಯಾಹ್ನ–ಅಸಾಧ್ಯ ಜನಜಂಗುಳಿ–ಅಸಾಧ್ಯ ಶೆಕೆ ಶುರುವಾಗಿ ಎಲ್ಲರಿಗೂ ಬೆವರು ಕಿತ್ಕೊಳ್ತಾ ಇತ್ತು. ಕೈಲಾಸಂ ಅಭಿಮಾನಿಯೊಬ್ಬರು ಹೇಳಿದರು. " ಇದು ಸಾಮಾನ್ಯ ಶೆಕೆ ಅಲ್ಲಪ್ಪಾ–ಬುದ್ಧ ಶೆಕೆ. 2500 ವರ್ಷದ್ದು".

**ಕೈಲಾಸಂ scrap book ನಿಂದ**

ಸಿಗರೇಟ್‌ಪ್ಯಾಕಿನ ಡ್ರಾಯರ್‌ಗಳ ಮೇಲೆ ಏನಾದರೂ ಗೀಚುವುದು ಕೈಲಾಸಂ ಅಭ್ಯಾಸ ಅವರ parker pen ನಲ್ಲಿ ಬರೆದ "arnold copy book type" ಇಂಗ್ಲಿಷ್ ಅಕ್ಷರಗಳು ಮುಕ್ತಾಫಲ! ನೋಡುವುದಕ್ಕೇ ಒಂದು ಸೊಗಸು. ಅನೇಕ ಬಾರಿ ಗಾದೆಗಳನ್ನೋ ಅಥವಾ racy rhymes ನ್ನೋ ಸಿಗಿರೇಟ್ ಪ್ಯಾಕಿನ ಮೇಲೆ ಗೀಚಿ ಎಸೆಯುತ್ತಿದ್ದರು : ಅದೇ ಅವರ scrap bookಉ ಹಾಗೆ ಗೀಚಿದ್ದು ಕೆಲವು ಇವು :

If wishes were horses, beggars could ride.
If kisses were doubloons, I'd soon be a bride.

*    *    *    *

A ಚೊಪ್ಕಲ್ in the hand is worth a ಗೊಂಚಲು on the branchಉ.
But ಗುರೀ must be goodಉ! (1)

*    *    *    *

If mind minds its mettle
matter matters little

*    *    *    *

ತಮ್ಮನ ಹತ್ತಿರ ಬೀರ್ರಾಳಿ ತೌರ್ಮನೇ ಬಿಂಕಾನ !

*    *    *    *

Soap deferred maketh the dirt stick (2)

*    *    *    *

"ಸತೀ ಸೋನಾ" (3) – "ರಂಡೀ ಜಾಗ್ನಾ"

*    *    *    *

"ಮುದ್ದುಕುಮಾರಯ್ಯನೇ" (4) "ಪದ್ದುಕೂ ಭೋಡಯ್ಯನೆ"

*    *    *    *

" A thing of duty is cloy for ever " (5)

*    *    *    *

Wages of gin is breath (6)

---

(1) A bird in the hand is worth two in the bush ಗಾದೆಯ ಅಣಕವಾಡು.

(2) Hope deferred maketh the mind sick ಅನ್ನುವ ಗಾದೆಯ ಅಣಕವಾಡು.

(3) " ಸತೀ ಸೋನಾ " ಒಂದು ಓದಿ picture ಹೆಸರು.

(4) ಇದು ಒಂದು ಶಂಕರಾಭರಣ ರಾಗದ ಪ್ರಸಿದ್ಧವಾದ ಕೃತಿಯ ಪಲ್ಲವಿ.

(5) A thing of beauty is joy for ever—ಇದರ ಅನುಕರಣ

(6) Wages of sin is death—ಇದರ ಅಣಕವಾಡು.

Some say I am after all a drunkardoo
But before all I am a thinkhardoo (7)

*  *  *  *

Honey contains vitamin 'Bee'

*  *  *  *

ಹಂಸ ನಡೆ ಬರ್ಲಿಲ್ಲ; ಕಾಗೆ ನಡೆ ಮರ್ತ್ಹೋಯ್ತು (8)

*  *  *  *

He was a good footballer—'left out' in every match

*  *  *  *

Ars est celare artem (9)

*  *  *  *

Tempus fugit (10)— but how fast !

*  *  *  *

Verbum sapienti sat est (11)

*  *  *  *

Booted and suited to the occasion

(7) ಕೈಲಾಸಂನ ಯಾರೋ 'drunkard' ಎಂದಾಗ ನೋವಿನಿಂದ ಅವರು ಹೇಳಿದ ಮಾತು.

(8) ನಮ್ಮ ಒಳ್ಳೆಯ ಪದ್ಧತಿಗಳನ್ನು ಮರೆತು ಇತರರ ಪದ್ಧತಿಗಳಿಗೆ ಮಾರುಹೋಗಿ ಅದನ್ನೂ ಸರಿಯಾಗಿ ಕಲಿಯದವರ ಪಾಡು.

(9) ಅರ್ಥ : Art lies in concealing art

(10) Time flies

(11) A word is enough for the wise—ಜಾಣನಿಗೆ ಒಂದು ಮಾತು, ಕೋಣನಿಗೆ ಒಂದು ಏಟು.

**ಕೈಲಾಸಂ ಮತ್ತು ಸಂಗೀತ**

ಸಂಗೀತ ಅಂದರೆ 'ಕೈ'ಗೆ ಪ್ರಾಣ. ಹಿಂದಿನ ಕಾಲದ ಘಟಾನುಘಟಿ ಸಂಗೀತಗಾರರ ಕಚೇರಿಗಳನ್ನು ಅವರು ಕೇಳಿದ್ದರು. ಕರ್ಣಾಟಕ ಸಂಗೀತದ ಸಾಮಾನ್ಯವಾಗಿ ಬಳಕೆಯಲ್ಲಿರುವ ಎಲ್ಲಾ ರಾಗಗಳೂ ಅವರಿಗೆ ಪರಿಚಿತ. ಅನೇಕ ರಾಗಗಳನ್ನು ಹಾರ್ಮೋನಿಯಂನಲ್ಲಾಗಲಿ ಬುಲ್‌ಬುಲ್ ತರಾಂಗಿನಲ್ಲಾಗಲಿ ಬಾರಿಸಿ ತೋರಿಸುವಷ್ಟು ರಾಗಜ್ಞಾನ ಅವರಿಗೆ ಇತ್ತು. ನಾಟಕದ ಮಟ್ಟುಗಳು ಅಂದರೆ ಅವರಿಗೆ ತುಂಬಾ ಪ್ರಿಯ. "ನಂಕಂಪ್ನಿ" ಮತ್ತು "ಶಂಬರನ ಶೃಂಗಾರ" ಈ ನಾಟಕಗಳಲ್ಲಿ ಅವರಿಗೆ ಈ ಬಗ್ಗೆ ಇದ್ದ ಪಾಂಡಿತ್ಯ ವ್ಯಕ್ತವಾಗುತ್ತದೆ ಅವರದು "ಗಂಡು" ಶಾರೀರ. ತುಂಬಾ ಸತ್ವಪೂರ್ಣವಾದ ಧ್ವನಿ. ಸಾಮಾನ್ಯ ಜನರು ಕಷ್ಟಪಡಬೇಕಾದ "ತಾರಸ್ಥಾಯಿ" ಯಲ್ಲಿ ಅವರ ಶಾರೀರ ಲೀಲಾಜಾಲವಾಗಿ ನುಡಿಯುತ್ತಿತ್ತು. ಇತರರ ಎದುರಿಗೆ ಹಾಡುವ ಅವರ ಗಾನಕ್ಕಿಂತ. ಅವರು ಒಬ್ಬರೇ ರೂಮಿನಲ್ಲಿದ್ದಾಗ ಆತ್ಮಾನಂದಕ್ಕಾಗಿ ಹಾಡಿಕೊಳ್ಳುತ್ತಿದ್ದ "ಸಂಗೀತವು" ಸಾರವತ್ತಾಗಿಯೂ, ಭಾವಪೂರ್ಣವಾಗಿಯೂ ಇರುತ್ತಿತ್ತು. ಇಂಗ್ಲಿಷ್ ಹಾಡುಗಳಲ್ಲಿ ಅವರಿಗೆ ಪ್ರಿಯವಾದುವೆಂದರೆ, "Sailor beware", "I love a lassie" "Tipperari" ಇವುಗಳು "ಇನ್ವೇನೋ ಸೋನೋ ." ಅನ್ನುವ ಒಂದು ಸ್ಪ್ಯಾನಿಷ್ ಹಾಡನ್ನೂ ಹಾಡುತ್ತಿದ್ದರು. ಇದರ ರಾಗ ನಮ್ಮ ನಟಭೈರವಿಯ ಮಾದರಿ ಇದೆ. ಈ ಹಾಡುಗಳನ್ನು ರೂಮಿನ ಹೊರಗೆ ನಿಂತು ಕೇಳುವುದು ಒಂದು ಅಪೂರ್ವ ಅನುಭವ !

ಪುರಂದರದಾಸರ ಪದಗಳೂ ಅವರ ಸ್ಟಾಕಿನಲ್ಲಿದ್ದುವು. ಬಹಳ ಪ್ರಸಿದ್ಧವಾದ "ಉಡುಪಿ ಕೃಷ್ಣಾ" ಪದವನ್ನು ಅವರು ಅಣಕವಾಡುವನ್ನಾಗಿ ಮಾಡಿ ಈ ರೀತಿ ಹಾಡುತ್ತಿದ್ದರು.

ಉಡುಪಿ ಕೃಷ್ಣಾ
ಅಡಿಗೆ ಮಾಡೋ
ತಡೆಯ ಲಾರೇ
ಬಿಡದೆ ಹಸಿವಾ ॥

ಕಡಲೆ ಹಿಟ್ಟೋಳ್
ಇಟಿಗೆ ಕಂಟ್ಟೀ
ವಡೆಯು ತಟ್ಟೀ
ಬಡಿಸೊ ಕಿಟ್ಟೀ ॥
ನೀರ ನೇದೀ
ನಾರೊಳ್ ಸುರಿದೂ

ಪುರಂದರದಾಸರ ಇನ್ನೊಂದು "ಪದ" ಅಂದರೆ "ಬೇಡವೋ ಬ್ರಾಹ್ಮಣ ದ್ವೇಷ ಬೇಡವೋ." ಇದು ಶಂಕರಾಭರಣ ರಾಗದಲ್ಲಿದೆ. ಈ ಪದ ದಲ್ಲಿ ಬರುವ ರಾಗಭಾವ ಎಷ್ಟು ಸೊಗಸು ಅಂದರೆ ಪಳಗಿದ ಸಂಗೀತಗಾರರು ಕೂಡ ರಾಗದ ವಿಚಿತ್ರ ಸಂಚಾರಗಳಿಗೆ ತಲೆತೂಗುವಂತಿರುತ್ತಿತ್ತು. ಇದನ್ನೂ ಅಣಕವಾಡುವಿಕಂತೆ ಹಾಡುತ್ತಿದ್ದರು. ಕೊನೆಯ ಚರಣದಲ್ಲಿ ಬರುವ "ಬೆನ್ನುಬಿಡದೆ ಬ್ರಾಹ್ಮಣರನ್ನು ಕಾಯುವನಲ್ಲೋ" ಎಂಬುದನ್ನು "ಬೆನ್ನು ಬಿಡದೆ ಮಾಧ್ವರನ್ನು ಕಾಯುವನಲ್ಲೋ" ಎಂದು ಬದಲಾಯಿಸಿ ಕೈಗಳನ್ನು ಅಭಿನಯಪೂರ್ವಕವಾಗಿ ಅಲ್ಲಾಡಿಸಿ ಹಾಡುತ್ತಿದ್ದರು. ಅವರ ಮನೋವೃತ್ತಿಗ ಹಾಸ್ಯ ಎಲ್ಲೆಲ್ಲೂ ಬೇಕು. ಸಂಗೀತ exception ಏನಲ್ಲ!

ಕಲ್ಯಾಣಿಯ ಜಾವಳಿ, "ಎಂತಟೀಕುಲುಕೇ" ಅವರ ಇನ್ನೊಂದು "ಖಾಸಾ" ಹಾಡು. ಇದರಲ್ಲೂ ರಾಗಭಾವ ಪಾಕವಾಗಿ ಇಳಿಯುತ್ತಿತ್ತು. "ಪೋವಕರಾವೇ ಇಟು ಕೋಕಿಲವಾಣಿ" ಎನ್ನುವ ಜಾವಳಿಯೂ ಅಷ್ಟೇ ಸೊಗಸು. ಕರಹರ ಪ್ರಿಯದಲ್ಲಿ "ಚೇತೇವಸಶ್ರೀ ಪರಮೇಶಾ" ಅನ್ನುವ ಒಂದು ಸಂಸ್ಕೃತ ಕೀರ್ತನೆಯನ್ನು ಹೇಳುತ್ತಿದ್ದರು. (ಅದನ್ನು ನಾನು ಕೇಳಿದ್ದು ಒಂದೇ ಬಾರಿ. 1944 ನೆಯ ಇಸವಿ ಶಿವರಾತ್ರಿಯ ದಿನ. ಅಂದು ರಾತ್ರಿ ಬಹಳ ಹೊತ್ತಿನವರೆಗೆ ಹಾಡುಗಳನ್ನು ಹೇಳುತ್ತಿದ್ದರು) ಆ ಕೀರ್ತನೆ ಯಲ್ಲಿ ಕೊನೆಯ ಭಾಗದಲ್ಲಿ "ತ್ಯಾಗರಾಜ ಪರಮಶಿವ ಕೈಲಾಸವಾಸ" ಅಂತ ಬರುತ್ತದೆ. ಅದು ಅವರ ಸ್ವಂತ ರಚನೆ ಇರಬೇಕು. ಅವರು ಹೇಳುತ್ತಿದ್ದ ಇನ್ನೊಂದು ಮರೆಯಲಾಗದ ಹಾಡು ಎಂದರೆ ನಾಟಕದ ವರದಾಚಾರ್ ಅವರ ಕಂದ ಪದ್ಯ, "ಅಂಬುಜಕೆ ರವಿಯೇ ಗತಿಯೆಂದೆಂಬ ಭಂಡನಂ ಸಟೆಯಂ

ನಾಡುವನಮ್ಮಾ" ಇದು ಅಪ್ಪಟ ಶಂಕರಾಭರಣ ರಾಗದಲ್ಲಿದೆ. ಇದರಲ್ಲಿ "ಪಟೇಯನಾಡುವನಮ್ಮಾ" ಎಂಬ ಭಾಗದಲ್ಲಿ ಬರುವ ರಾಗದ "ಜಾರು" ಅನುಕರಣೀಯ. ಅದರ ಸೊಗಸು "ಅನುಭವ ರಸಿಕೋ ವಿಜಾನಾತಿ" ಬಾಬ್ತು!

ಕೈಲಾಸಂ ನಾಟಕಗಳಲ್ಲಿ ಬರುವ ಹಾಡುಗಳಲ್ಲಿ "ಮಟ್ಟು" ಗಳಲ್ಲಿ ರಾಗಭಾವ ಬಟ್ಟಿ ಇಳಿಸಿದಂತೆ ಇದೆ. ಆಯಾ ರಾಗಗಳ ವಿಶೇಷ ಸ್ವರ ಸಂಚಾರ ಗಳನ್ನು ಯುಕ್ತವಾದ ಜಾಗಗಳಿಗೆ ಅಳವಡಿಸಿ, ಹಾಡಿನ ಒಂದೇ ಸಾಲನ್ನು ಕೇಳಿದರೂ ಅವರಲ್ಲಿ ರಾಗದ ವಿಶೇಷ ಗುಣ ಕಾಣುವಂತೆ ಮಾಡಿದ್ದಾರೆ. ಅವರ ಹಂಸಧ್ವನಿಯ (ಕಂಸಧ್ವನಿ! ಎಂತಹ ಅಡ್ಡ ಹೆಸರು) "ನರನಿರ್ಜರರ", ಬೇಗಡೆಯ "ಎಳೆಯ ತಾವರೆಯಂತೆ" ಫರಜ್ ರಾಗದ "ಇನ್ನು ನಿನ್ನ ಆಗ್ರಹವೇ" ಕಾನಡರಾಗದ "ಪೋಲೀಸಿನವನೆ ಬರಲಿ", ತೋಡಿಯ "ಪೋವೆಯಾ ಭೂಪ", ಜುಂಜೂಟಿಯ "ಇಂದು ಬದನೆಕಾಯಿ" ನಾ ಬೆಲೆ, ಸುರಟಿ ರಾಗದ "ನಾಗವೇಣಿ" ಇವೆಲ್ಲ ಮೇಲಿನ ಮಾತಿಗೆ ಉದಾಹರಣೆಗಳು. ಕೈಲಾಸಂ ಇವುಗಳನ್ನು ಹೇಳುವಾಗ ಆ ಹಾಡುಗಳ ಸೊಬಗಿನ ಜೊತೆಗೆ ತಮ್ಮ ಹಾಡಿಕೆಯ ಒಂದು extra dimension ಕೊಡುತ್ತಿದ್ದರು!

ನಮ್ಕಳ್ಳಬ್ಬು ನಾಟಕದ "ಪಿಳ್ಳೂರಾಯ" ಸಂಗೀತದ ಖಯಾಲಿಯ ಅತಿರೇಕ. ಅವನಿಗೆ ಮಾಮೂಲು ಮಾತನಾಡುವ ಸಂಭಾಷಣೆಯೆಲ್ಲಾ ಸಂಗೀತದಲ್ಲಿರಬೇಕು. ಅವನ ದೃಷ್ಟಿಯಲ್ಲಿ ಯಾವ ಮಾತನ್ನಾಗಲಿ ಸಂಗೀತಕ್ಕೆ set ಮಾಡಿದರೆ ಆ ಮಾತು ಎಂದಿಗೂ ಮರೆಯುವುದಿಲ್ಲ. "Music ಇದ್ರೆ... Memorise ಆಗುತ್ತೆ". "ಅಮರ" ವನ್ನು ರಾಗಕ್ಕೆ set ಮಾಡಿರುವುದರಿಂದ ತಾನೇ, ಹುಡುಗರು boyhoodನಲ್ಲಿ "ಲಟಾಟಾ ಲೋಟಟಾ ಟಾಟ! ಲಂಟಟಾ ಲಟಟಾ ಟಟಾ" ಅಂದ ಬಡಕೊಂಡ್ರೆ ಎಂಭತ್ತು ವಯಸ್ಸಾದ್ರೂ death-bedನಲ್ಲಿ din ಆಗ್ತಿರುತ್ತೆ. ಪಿಳ್ಳೂರಾಯ ವರ್ತಮಾನ ಪತ್ರಿಕೆಯ ಮಾಮೂಲಿ news itemಗಳಿಗೆ ಅವುಗಳ emotionಗಳಿಗೆ ತಕ್ಕ ರಾಗಗಳನ್ನು ಜೋಡಿಸಿ ಹಾಡುವ "ಹುಚ್ಚು" ಗಮನಾರ್ಹ

ಅಂತೂ ಕೈಲಾಸಂ ಅವರ ಮಾತುಗಳೂ ಜೋಕುಗಳೂ ಸ್ಮರಣೀಯ ವಾದರೆ ಅವರ ಸಂಗೀತವೂ ತಥಾ.

# ಶ್ರೀ ಟಿ. ಪಿ. ಕೈಲಾಸಂ—ಒಂದು ನೆನಪು

ಕೆ. ಎನ್. ಶ್ರೀನಿವಾಸಮೂರ್ತಿ

1942-43 ನೇ ಇಸವಿಯಲ್ಲಿ ಮೈಸೂರಿನ ಯೂನಿವರ್ಸಿಟಿ ಯೂನಿಯನ್ ಆಚರಿಸಿದ ನಾಡಹಬ್ಬಕ್ಕೆ ಶ್ರೀ ಕೈಲಾಸಂರವರನ್ನು ಕರೆಸಿದ ಮತ್ತು ಅನೇಕ ಜನರಿಗೆ ಅವರ ಪರಿಚಯ ಮಾಡಿಸಿದ ವಿಶಿಷ್ಟ ಗೌರವ ನನ್ನ ಆಪ್ತಮಿತ್ರರಾದ ಶ್ರೀ ಡಿ. ಎಂ. ಸಿದ್ದಯ್ಯನವರಿಗೆ ಸಲ್ಲಬೇಕಾದ್ದು. ಶ್ರೀ ಕೈಲಾಸಂರವರು ಕೆಲವು ದಿನಗಳ ಹಿಂದೆ ಬೆಂಗಳೂರಿಗೆ ಎಲ್ಲಿಂದಲೋ ಬಂದಿದ್ದಾರೆ ಎನ್ನುವ ವದಂತಿ ಮೈಸೂರಿನಲ್ಲಿ ನಮ್ಮ ವಿದ್ಯಾರ್ಥಿ ವರ್ಗಕ್ಕೆ ತಿಳಿಯಿತು. ಶ್ರೀ ಕೈಲಾಸಂ ಅಲ್ಲಿಯವರೆಗೆ ಎಲ್ಲಿದ್ದರು, ಏನು ಮಾಡುತ್ತಿದ್ದರು ಅನ್ನುವುದು ನನಗೆ ಯಾರಿಗೂ ತಿಳಿಯದು. ಕೈಲಾಸಂ ಅಂದರೆ ಒಬ್ಬ ಅಪರೂಪ ವ್ಯಕ್ತಿ ಎಂದು ಮಾತ್ರ ನಮ್ಮಗಳ ಭಾವನೆ. ಅವರ ಹೆಸರನ್ನು ಪೂರ್ತಿ ಸಿಗರೇಟಿನ ಹೊಗೆಯಲ್ಲಿಯೇ ಬರೆದು ಕೆಲವು ನಿಮಿಷಗಳ ತನಕ ಹಾಗೆಯೇ ಗಾಳಿಯಲ್ಲಿ ನಿಲ್ಲುವಂತೆ ಮಾಡಬಲ್ಲ ಅತಿಶಯ ವ್ಯಕ್ತಿ ಎಂಬ ಪ್ರವಾದ ಕೂಡ ಅವರ ವಿಷಯದಲ್ಲಿತ್ತು. ಅವರ ನಾಟಕಗಳ ಪರಿಚಯ, ಅದರಲ್ಲಿ ಬರುವ ಹಾಸ್ಯ ಸನ್ನಿವೇಶಗಳು ಮತ್ತು ಮಾತುಗಳು ವಿದ್ಯಾರ್ಥಿಗಳಿಗೆ ಆಗಲೇ ಪರಿಚಯವಿದ್ದರೂ, ಅವರನ್ನು ಕಣ್ಣಾರೆ ನೋಡಿ ಅವರ ವ್ಯಕ್ತಿತ್ವದ ಪರಿಚಯವನ್ನು ಮಾಡಿಕೊಂಡಿದ್ದ ವಿದ್ಯಾರ್ಥಿಗಳು ಇರಲಿಲ್ಲ.

ಯೂನಿವರ್ಸಿಟಿ ಯೂನಿಯನ್ ಆಚರಿಸಬೇಕೆಂದಿದ್ದ ನಾಡಹಬ್ಬ ಇನ್ನೂ ಎರಡು, ಮೂರು ವಾರಗಳಿದ್ದ ಹೊತ್ತಿಗೆ ಶ್ರೀ ಕೈಲಾಸಂರವರು ಬೆಂಗಳೂರಿಗೆ ಬಂದಿದ್ದಾರೆಂಬ ಸುದ್ದಿ ತಿಳಿದದ್ದು. ಶ್ರೀ ಡಿ. ಎಂ. ಸಿದ್ದಯ್ಯನವರು ಆಗ ಯೂನಿವರ್ಸಿಟಿ ಯೂನಿಯನ್ನಿನ ಕಾರ್ಯದರ್ಶಿಯಾಗಿದ್ದರು. ನಾನು ಚರ್ಚೆ ಮತ್ತು ಭಾಷಣಗಳ ಕನ್‌ವೀನರ್ ಆಗಿದ್ದೆ. ನಮ್ಮ ಸ್ನೇಹಿತರೆಲ್ಲಾ ಶ್ರೀ ಕೈಲಾಸಂರವರನ್ನು ಕರೆಸಿದರೆ ನಾಡಹಬ್ಬದ ಆಚರಣೆಗೆ ತುಂಬ ಕಳೆ

ಕಟ್ಟುತ್ತಾರೆ ಅವರ ಹೆಸರನ್ನಷ್ಟೆ ಕೇಳಿದರೆ ಸಾಕು. ಜನಸಂದಣಿ ಕಿಕ್ಕಿರಿದು, ಹಬ್ಬ ಯಶಸ್ವಿಯಾಗಿ ನಡೆಯುವುದರಲ್ಲಿ ಸಂಶಯವಿಲ್ಲ ಎಂದು ಅಭಿಪ್ರಾಯಂ ಪಟ್ಟರು. ಜೊತೆಗೆ ಕನ್ನಡನಾಡಿನ ಒಬ್ಬ ಉನ್ನತ ನಾಟಕಕರ್ತರನ್ನು ಗೌರವಿಸಲು ಸದವಕಾಶ ಎಂಬ ಧ್ಯೇಯವೂ ಇತ್ತು. ಶ್ರೀ ಸಿದ್ದಯ್ಯನವರು ಯೂನಿಯನ್ ಪ್ರೆಸಿಡೆಂಟ್ ಸಮ್ಮತಿ ಪಡೆದು ಶ್ರೀ ಕೈಲಾಸಂ ಅವರ ಅಡ್ರೆಸ್ ಪತ್ತೆ ಹಚ್ಚಿ, ಒಂದು ಕಾಗದ ಬರೆದರು. ಒಂದು ವಾರದೊಳಗೆ ಉತ್ತರ ಬಂತು ನನಗೆ ಚೆನ್ನಾಗಿ ನೆನಪಿರುವಂತೆ ಅದು ಹೀಗಿತ್ತು. 'Apropos your letter of I regret my inability to participate in the function' ಎಂದಿಷ್ಟೇ ಇತ್ತು. ನಮಗೆಲ್ಲಾ ತುಂಬ ಆಶಾಭಂಗವಾಯಿತು. ಆದರೆ ಶ್ರೀ ಸಿದ್ದಯ್ಯನವರು ವಿದ್ಯಾರ್ಥಿ ದೆಶೆಯಲ್ಲಿಯೂ ಕೂಡ ಬಹಳ ಉತ್ಸಾಹಶಾಲಿಗಳೂ ಹಿಡಿದ ಕೆಲಸದಲ್ಲಿ ಜಯಗಳಿಸಲೇಬೇಕೆಂಬ ದಿಟ್ಟ ಪ್ರತಿಜ್ಞೆಯುಳ್ಳವರೂ ಆಗಿದ್ದರು. ಎಷ್ಟು ಕಷ್ಟವಾದರೂ ಒಂದು ದಿನದ ಮಟ್ಟಿಗಾದರೂ ಶ್ರೀ ಕೈಲಾಸಂರವರನ್ನು ಕರೆಸಿ ವಿದ್ಯಾರ್ಥಿಗಳಿಗೆ ಅವರ ಪರಿಚಯ ಮಾಡಿಸಬೇಕೆಂಬ ಹಟದಿಂದ ಶ್ರೀ ಸಿದ್ದಯ್ಯನವರು ಬೆಂಗಳೂರಿಗೆ ಸ್ವತಃ ಹೊರಟರು. ಶ್ರೀ ಕೈಲಾಸಂರವರನ್ನು ಕಂಡು, ಅವರಿಗೆ ಮೈಸೂರಿನ ವಿದ್ಯಾರ್ಥಿಗಳಿಗೆ ಅವರನ್ನು ನೋಡುವ ಕಾತುರತೆ ಮತ್ತು ಅವರು ಬರದಿದ್ದರೆ ವಿದ್ಯಾರ್ಥಿಗಳಿಗೆ ಆಗುವ ಆಶಾಭಂಗವನ್ನು ಬಹಳ ಮನಮುಟ್ಟುವಂತೆ ಹೇಳಿ, ಅವರನ್ನು ಒಪ್ಪಿಸಿ, ಮೈಸೂರಿಗೆ ವಾಪಸ್ಸು ಬಂದರು. ಆದರೂ ಶ್ರೀ ಕೈಲಾಸಂರವರು ಬರುವವರೆಗೂ ನಮಗೆ ಒಂದು ಭಯ ...ಬರುತ್ತಾರೋ ಇಲ್ಲವೋ ಅಂತ.

ನಾಡಹಬ್ಬದ ಹಿಂದಿನ ದಿನ ಶ್ರೀ ಕೈಲಾಸಂರವರು ಬಂದೇ ಬಂದರು. ಶ್ರೀ ಡಿ. ಎಂ. ಸಿದ್ದಯ್ಯನವರು ಬೆಂಗಳೂರಿನಿಂದ ಜೊತೆಯಲ್ಲಿಯೇ ಕರೆದು ಕೊಂಡು ಬಂದರು. ಅವರನ್ನು ಮಾಡರನ್ ಹಿಂದೂ ಹೋಟೇಲಿನಲ್ಲಿ, ಯೂನಿವರ್ಸಿಟಿ ಯೂನಿಯನ್ನಿನ ಅತಿಥಿಗಳಾಗಿ ಇಳಿಸಲಾಯಿತು. ನಾಡ ಹಬ್ಬದ ಮೊದಲನೆಯದಿನ ಮಹಾರಾಜಾ ಕಾಲೇಜಿನ quadrangle ನಲ್ಲಿ "Art" ಅನ್ನುವ ವಿಷಯದ ಮೇಲೆ ಬಹಳ ಗಹನವಾದ ಭಾಷಣ ಅವರದು. ಜನ ಕಿಕ್ಕಿರಿದು ತುಂಬಿದ್ದರು. ಅಂದು ಮಿಕ್ಕ ಕೆಲವರ ಭಾಷಣಗಳೂ ಇದ್ದವು.

ಮೂರನೆಯ ದಿನ ಶ್ರೀ ಕೈಲಾಸಂ ಯಾವುದಾದರೂ ಅವರಿಗೇ ಇಷ್ಟವಾದ ವಿಷಯದ ಮೇಲೆ ಭಾಷಣ ಮಾಡುವ ಕಾರ್ಯಕ್ರಮ ಇತ್ತು. ಜನಸಂದಣಿ ವಿಪರೀತವಾಗಿತ್ತು. ಅವರೆ ವೇದಿಕೆಯ ಮೇಲೆ ಬಂದವರು ಅವರು, ಭಾಷಣ ಮಾಡದೆ, ವಿದ್ಯಾರ್ಥಿಗಳ ಜೊತೆ ಪ್ರಶ್ನೆ–ಉತ್ತರದ ಸಂಭಾಷಣೆಗೆ ಮಾತ್ರ ಒಪ್ಪಿದರು. ಸುಮಾರು 1 1/2 ಗಂಟೆಗಳ ತನಕ ಹಾಸ್ಯದ ಹೊನಲಿನಲ್ಲಿ ಎಲ್ಲರನ್ನೂ ಮುಳುಗಿಸಿದರು. ಪ್ರಶ್ನೆ ಕೇಳುವುದೇ ತಡ, ಉತ್ತರವನ್ನು ಮಿಂಚಿನಂತೆ ಶ್ರೀ ಕೈಲಾಸಂರವರು ಅವರ ಅನನುಕರಣೀಯ ರೀತಿಯಲ್ಲಿ ಕೊಡುತ್ತಿದ್ದರು. ಅವರ ಸಮಯಸ್ಫೂರ್ತಿ ಅದ್ಭುತವಾಗಿತ್ತು. ಅಂದು ಎಲ್ಲಾದರೂ 30 40 ಪ್ರಶ್ನೆಗಳಿಗೆ ಉತ್ತರ ಕೊಟ್ಟರು. ಶ್ರೀ ಬಾಬೂರಾವ್ ಪಟೇಲ್ ಅಥವ ಶ್ರೀ ಎ. ಎಸ್. ಜೋಹರ್ ಈಗ ಬರೆದು ಉತ್ತರಿಸುವಂತೆ, ಶ್ರೀ ಕೈಲಾಸಂ ಆಗ ತಕ್ಷಣ ಉತ್ತರ ಕೊಡುತ್ತಿದ್ದರು. ಅಷ್ಟು ವೇಗವಾದ, ಅದ್ಭುತವಾದ ಬುದ್ಧಿ ಅಪರೂಪ. ನನಗೆ ಜ್ಞಾಪಕವಿರುವಂತೆ ಒಂದೆರಡು ಪ್ರಶ್ನೆ–ಉತ್ತರಗಳನ್ನು ಇಲ್ಲಿ ಹೇಳಬಯಸುತ್ತೇನೆ "ಕರ್ಣಾಟಕದಲ್ಲಿ ಕನ್ನಡಕ್ಕೆ ಯಾವ ಸ್ಥಾನ" ಎಂದು ಒಬ್ಬರು ಕೇಳಿದರು. "ಕನ್ನಡಿಗರು ಕೊಡುವ ಸ್ಥಾನ" ಅಂತ ನೇರವಾಗಿ ಉತ್ತರಿಸಿದರು. ಮತ್ತೊಬ್ಬರು 'Are grey hairs to be respected ?' ಎಂದು ಕೇಳಿದ್ದಕ್ಕೆ My friend, in these days black hairs are to be suspected ! ಅಂದರು. ಬೇರೊಬ್ಬರು, 'what is the difference between you and Mr. George Bernard Shaw?' ಅಂದದ್ದಕ್ಕೆ 'No difference We both come from the same place He comes from Ireland and I come from Iyer-land' ಎಂದು ತಕ್ಷಣ ಉತ್ತರ ಕೊಟ್ಟರು.

ಒಂದೊಂದು ಉತ್ತರ ಕೊಟ್ಟಾಗಲೂ ಜನಗಳು ಕಿವಿ ಕಿವುಡಾಗುವಂತೆ ಕರತಾಡನ ಮಾಡುತ್ತಿದ್ದರು ಇದು ನಿಲ್ಲುವುದಕ್ಕೆ 2-3 ನಿಮಿಷಗಳಾದರೂ ಬೇಕಾಗುತ್ತಿತ್ತು. ಕೆಲವರಿಗೆ ಜಾಗ್ರತೆ ಅರ್ಥವಾಗದೆ, ಆಮೇಲೆ ಪಕ್ಕದವರಿಂದ ಕೇಳಿ ನಕ್ಕ ಪ್ರಸಂಗಗಳೂ ಬಹಳವಿದ್ದವು.

ನಾಡಹಬ್ಬ ಮುಗಿದಮೇಲೆ, ಮಾಡರ್ನ್ ಹಿಂದೂ ಹೋಟೇಲಿನಿಂದ ಬೇರೆ ಕಡೆಗೆ ಅವರ ಬಿಡಾರವನ್ನ ಬದಲಾಯಿಸಬೇಕಾಯಿತು, ಯೂನಿವರ್ಸಿಟಿ

ಇದ್ದವು. 'The Nook' ಒಂದು ಯಾತ್ರಾಸ್ಥಳದಂತೆ ಇತ್ತು. ಮೈಸೂರಿನ ನಾಗರೀಕರು. ಬರವಣಿಗೆಗಾರರು, ಹೆಚ್ಚಾಗಿ ವಿದ್ಯಾರ್ಥಿಗಳು ಬೆಳಗಿನಿಂದ ರಾತ್ರಿಯವರೆಗೂ ಕೈಲಾಸಂ ಭೇಟಿ ಮಾಡುತ್ತಿದ್ದರು. ಬರುವವರು ಒಂದು ಸ್ವಲ್ಪ ಹೊತ್ತಿರಬೇಕೆಂದುಕೊಂಡು ಬಂದರೂ, ಶ್ರೀ ಕೈಲಾಸಂರವರ ಮಾತಿನ ಹಾಸ್ಯ ಸರಣಿಯಲ್ಲಿ ತಲ್ಲೀನರಾಗಿ ಎಲ್ಲ ಮರೆತು, ಅಲ್ಲೆ ಕೂಡುತ್ತಿದ್ದರು.

ಕೈಲಾಸಂ ಅವರ ಸಾಮಾನು ಬೆಂಗಳೂರಿನಿಂದ ತರಿಸಿಕೊಂಡರು. ಹೆಚ್ಚೇನೂ ಇರಲಿಲ್ಲ. ಒಂದು ಹಳೆಯ ಲೆಗ್ ಹಾರ್ಮೋನಿಯಂ, ಬುಲ್ ಬುಲ್ ತರಂಗ್ ಒಂದು water bottle (ಫೆಲ್ಟ್ ಕವರಿದ್ದದ್ದು), ಒಂದು ಕೋಟು ಇಷ್ಟೆ. water bottle ಯಾರೋ ಅವರ ಸಂಬಂಧಿಕರು ಕೊಟ್ಟಿದ್ದೆಂದು ಹೇಳಿದರು. ಅವರ ಲೆಗ್‌ಹಾರ್ಮೋನಿಯಂ ನಿಜಕ್ಕೂ ಅಪೂರ್ವವಾದದ್ದು. ಅದರಮೇಲೆ ತಲ್ಲೀನರಾಗಿ ಅನೇಕ English ಹಾಡುಗಳನ್ನ piano ಮೇಲೆ ಬಾರಿಸುವಂತೆ ಗಂಭೀರವಾಗಿ ನುಡಿಸುತ್ತಿದ್ದರು. English Music ಕಂಡರೆ ಅವರಿಗೆ ತುಂಬ ಪ್ರೀತಿಯಿತ್ತು. 'Sailor beware, sailor take care' ಎಂಬ ಸಮುದ್ರ ಗೀತೆಯನ್ನ ಬಹಳ ಆಕರ್ಷಕವಾಗಿ ಒಂದು ದಿನ ರಾತ್ರಿ ಬಾರಿಸಿದ್ದನ್ನ ಮರೆಯಲಾರೆ. English Music ಪ್ರಕೃತಿಯಲ್ಲಿ ಕಾಣುವ ನದಿ, ತೊರೆ, ಸಮುದ್ರ ಮತ್ತು ಗಾಳಿಯು ಮಾಡುವ ಧ್ವನಿಗಳನ್ನು ಅವಲಂಬಿಸಿದೆ ಅಂತ ಅವರ ಮತವಿತ್ತು. ಅವರ ಕೋಟು ಸ್ವಲ್ಪ ಹಳೆಯದು ಇದನ್ನು ಹೆಚ್ಚಾಗಿ ಉಪಯೋಗಿಸುತ್ತಿರಲಿಲ್ಲ. ಅದು ಅವರಿಗೆ ಬಿಗಿಯಾಗಿಯೇ ಇತ್ತು. ಒಂದು ಸಾರಿ ಶ್ರೀ ಕೈಲಾಸಂ "It is very affectionate. It touches me on all sides !! " ಅಂತ ಹಾಸ್ಯವಾಗಿ ಅವರ ಬಿಗಿಯಾದ ಕೋಟಿಗೆ compliments ಕೊಟ್ಟರು. ಕಚ್ಚೆಪಂಚೆ, ಅದರ ಮೇಲೆ ಕರೀ ಬನೀನು. ಇಷ್ಟೆ ಅವರು ಧರಿಸುತ್ತಿದ್ದ ಸರಳ ಉಡಿಗೆ. ಅದು ಅವರಿಗೆ ಚೆನ್ನಾಗಿಯೂ ಕಾಣುತ್ತಿತ್ತು.

ಕಾಲೇಜಿನಲ್ಲಿ ಶ್ರೀ ಕೈಲಾಸಂರವರ ಹೊಸ ಹೊಸ 'Joke' ಗಳು ಬಿಸಿ ಬಿಸಿ ದೋಸೆಗಳಂತೆ ವಿದ್ಯಾರ್ಥಿಗಳಿಗೆ ಪ್ರಿಯವಾಗುತ್ತಿದ್ದವು. ಸಂಜೆ ಸರಸ್ವತಿಪುರಂನಲ್ಲಿ ಅವರನ್ನು ನೋಡಲು ಹೋದಾಗ ಅಲ್ಲಿದ್ದವರು ಅಂದು ಕೈಲಾಸಂರವರ ಕುಲುಮೆ ಇಂದ ಹೊರಬಿದ್ದ ನಗೆಕಿಡಿಗಳನ್ನ ನಮಗೆ

ಯೂನಿಯನ್ನಿನ ದುಡ್ಡು ಅವರ ಖರ್ಚಿಗೆ, ಹಬ್ಬ ಮುಗಿದಮೇಲೆ ಬಳಸುವುದಕ್ಕೆ ಆಗದ್ದರಿಂದ. ಅವರು ಒಂದೆರಡು ದಿನ ಅಲ್ಲ, ಇಲ್ಲಿ ಇರಬೇಕಾಯಿತು. ಆದರೆ ಅವರು ಮೈಸೂರಿಗೆ ಬಹಳ ಹೊಂದಿಕೊಂಡಂತೆ ಕಂಡದು. ಬೆಂಗಳೂರಿನ ಯೋಚನೆಯನ್ನೇ ಬಿಟ್ಟಂತೆ, ಮೈಸೂರಿನಲ್ಲಿ ಇದ್ದು ಅವರ ಕೆಲವು ನಾಟಕಗಳನ್ನು ಬರೆಯುವ ಇಚ್ಛೆಯನ್ನು ವ್ಯಕ್ತಪಡಿಸಿದರು ಶ್ರೀ ಡಿ ಎಂ. ಸಿದ್ದಯ್ಯನವರು ಸರಸ್ವತಿಪುರಂನಲ್ಲಿ ಒಂದು ಸಣ್ಣ ಮನೆಯನ್ನ ಬಾಡಿಗೆಗೆ ಗೊತ್ತುಮಾಡಿದರು. ಯೂನಿಯನ್ ರೆಸ್ಟೋರೆಂಟಿನ ಶ್ರೀ ರಾಮಯ್ಯರ್, ಶ್ರೀ ಕೃಷ್ಣಯ್ಯರ್‌ರವರು ಊಟದ ಏರ್ಪಾಟನ್ನು ಮಾಡಿದರು. ಆದರೆ ಕೆಲವು ತಿಂಗಳಾದರೂ ಅವರು ಇರಬೇಕಾದ್ದರಿಂದ ಅವರ ಮತ್ತಿತರ ಖರ್ಚಿಗೆ ಸರಿಯಾದ ವ್ಯವಸ್ಥೆ ಮಾಡಬೇಕೆಂದು ಯೋಚಿಸಿ ಅವರನ್ನು ಒಂದು "one man show" ಗೆ ಒಪ್ಪಿಸಿದೆವು. ಆದರಲ್ಲಿ ಬಂದ ದುಡ್ಡನ್ನು ಶ್ರೀ ಸಿದ್ದಯ್ಯನವರು post office savings bank account ನಲ್ಲಿಟ್ಟರು ಅವರ ನಾಟಕಗಳು, ಬರವಣಿಗೆಗಳು ಮತ್ತು ಷೋಗಳಿಂದ ಬಂದ ಹಣದಿಂದ ಯಾವುದಾದರೂ ಖಾಯಂ ವ್ಯವಸ್ಥೆ ಏರ್ಪಡಿಸಬೇಕೆಂಬ ಆಶೆಯಿತ್ತು. ಇದರಿಂದ ಶ್ರೀ ಕೈಲಾಸಂರವರು ಇನ್ನೂ ಅನೇಕ ನಾಟಕಗಳನ್ನು ಕನ್ನಡಕ್ಕೆ ಕೊಡುವರೆಂಬ ಉದ್ದೇಶ ಇತ್ತು. ಅವರ ಪುಸ್ತಕಗಳ Royalty ಏನಾಗು ತ್ತಿತ್ತೋ, ಏನೋ ಅವರಿಗೇ ಗೊತ್ತಿರಲಿಲ್ಲ. ಅವರು ಆದರ ವಿಷಯವಾಗಿ ಯೋಚಿಸಿದ್ದಂತೆಯೂ ಕಾಣಲಿಲ್ಲ. ದುಡ್ಡಿನ ಆಶೆಗಾಗಿ ಅವರು ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಆಗಾಗ್ಗೆ ಅವರು "A poet's guerdon is not gold" ಎಂದು ಹೇಳುತ್ತಿದ್ದದ್ದು ಜ್ಞಾಪಕವಿದೆ.

ಸರಸ್ವತಿಪುರಂನ ಮನೆ ದೊಡ್ಡ ಕಾಂಪೌಂಡಿನಲ್ಲಿ ಬಹಳ ಹಿಂದಕ್ಕೆ ಇತ್ತು. ಇದಕ್ಕೆ ಶ್ರೀ ಕೈಲಾಸಂರವರೇ "The Nook" ಅಂತ ಚೆನ್ನಾಗಿ ಅನ್ವಯಿಸುವ ನಾಮಕರಣ ಮಾಡಿದರು. ಇದನ್ನು ಬಿಳೀ ಸೀಮೆಸುಣ್ಣದಲ್ಲಿ ಗೇಟ್‌ಮೇಲೆ ಯಾರೋ ಬರೆದರು. ಈ Nook ನಾನು ಮರೆಯುವಂತಿಲ್ಲ. ಇಲ್ಲಿ ಸಾಮಾನ್ಯವಾಗಿ ಸಂಜೆ ನಾನು ಶ್ರೀ ಸಿದ್ದಯ್ಯನವರ ಜೊತೆ ಆಗಾಗ್ಗೆ ಹೋಗುತ್ತಿದ್ದೆ. ಒಬ್ಬೊಬ್ಬನೇ ಹೋದ ಒಂದೆರಡು ಸಂದರ್ಭಗಳೂ

ಹೇಳುತ್ತಿದ್ದದುಂಟು. ಒಂದುಬಾರಿ ಒಬ್ಬ ಕಾಲೇಜ್ ಆಕ್ಟರ್ ಏನನ್ನೋ ಮಾತಾಡುತ್ತಾ, ತಮ್ಮ ಉತ್ತಮ ಅಭಿನಯದ ವಿಷಯವಾಗಿಯೂ, ಮತ್ತು ಕೈಲಾಸಂರವರ ನಾಟಕಗಳ ಪರಿಚಯ ಅವರಿಂದಲೇ ವಿದ್ಯಾರ್ಥಿಗಳಿಗೆ ಆದಂತೆಯೂ ಜಂಬ ಹೇಳಿಕೊಂಡದ್ದು ಶ್ರೀ ಕೈಲಾಸಂರವರ ಕಿವಿಗೆ ಮುಟ್ಟಿತು ಅವರು ಶ್ರೀ ಕೈಲಾಸಂರವರನ್ನು ಬಹಳ familiar ಆಗಿ "Hallo Kai" ಅಂತಲೂ ಸಂಬೋಧಿಸುತ್ತಿದ್ದರು. ಇಷ್ಟು familiarity ಅವರಿಗೆ ಸರಿಬಿದ್ದಂತೆ ಎಣಲಿಲ್ಲ. ಈ ಆಕ್ಟರ್ ಹೆಸರು 'J' ಇಂದ ಶುರುವಾಗಿತ್ತು. ಅದಕ್ಕೆ ಶ್ರೀ ಕೈಲಾಸಂರವರು ಕೂಡ ಬಹಳ familiar ಆಗಿ ಅವರನ್ನ "Hallo J Very well J" ಅಂತಲೇ ಮಾತಾಡಿಸುತ್ತಿದ್ದರು. ಒಂದುದಿನ ಈ ಆಕ್ಟರ್ ಎದ್ದುಹೋದಮೇಲೆ ನನ್ನ ಕೈಲಿ 'Look at this fellow 'J'. I am abusing him everyday. But he takes it as a great compliment !' ಅಂತ ಹೇಳಿದರು. ನನಗೆ ಅರ್ಥವಾಗಲಿಲ್ಲ. ಅವರಲ್ಲಿದ್ದ Chambers's Dictionary ಕೈಗೆ ಕೊಟ್ಟು "Jay" ಅಂದರೆ ಏನು ಅಂತ ನೋಡು ಅಂದರು. ಓದಿ ನನಗೆ ತಡೆಯಲಾರದಷ್ಟು ನಗು ಬಂತು ನಾನು ಕೂಡ ಓದುಗರಿಗೆ Chambers's Dictionary ನೋಡಿ ಅಂತ ಹೇಳಿಬಿಡುತ್ತೇನೆ.

ಶ್ರೀ ಕೈಲಾಸಂರವರು ಇಂಗ್ಲಿಷ್ proverbsನ್ನು ತಿರುಗಿಸಿ ಹೊಸ ಹೊಸ proverbs ರಚಿಸುವುದರಲ್ಲ ನಿಪುಣರಿದ್ದರು. 'A bird in the hand is worth two in the bush' ಅನ್ನುವುದಕ್ಕೆ ಹೋಲುವಂತೆ 'A hair on the head is worth two on the brush !" ಅಂತ ರಚಿಸಿದ್ದರು. ಹೀಗೆಯೇ "where there is a will there is a way" ಅನ್ನುವುದನ್ನು "where there is a swill there is a sway ! " ಅಂತ ತಿರುಗಿಸಿ ಹೇಳುತ್ತಿದ್ದರು. "Wages of sin is death" ಅನ್ನುವುದನ್ನ "wages of gin is breath !" ಅಂತ ಹೇಳುತ್ತಿದ್ದರು. ಇಂತಹವು ಇನ್ನೂ ಎಷ್ಟೋ ಇದ್ದವು.

ಇನ್ನೊಂದು ಸಂದರ್ಭದಲ್ಲಿ ಒಬ್ಬ ಅತ್ಯಂತ ಸ್ಥೂಲಕಾಯದ ದೊಡ್ಡ ಮನುಷ್ಯರಿಗೆ " three chairs to ....hip hip ಹುರೆ !!" ಎಂದಿದ್ದು, ಎಷ್ಟು ಚೆನ್ನಾಗಿ ಇವರಿಗನ್ವಯಿಸುತ್ತದೆ ಅಂದು ಎಲ್ಲರನ್ನೂ ನಗಿಸಿದರು.

ಶ್ರೀ ಕೈಲಾಸಂರವರ ಜ್ಞಾಪಕಶಕ್ತಿಯೂ ಅಪರೂಪವಾದದ್ದೇ. ಒಂದು ದಿನ ಅವರ "ಸೂಳೆ" ನಾಟಕವನ್ನು ರಾತ್ರಿ ಒಬ್ಬ ಶಿಷ್ಯನಿಗೆ ಬರೆದುಕೊಳ್ಳಲು ಹೇಳುತ್ತಿದ್ದರು. "my ಸೂಳೆ is an educated ಸೂಳೆ ... ತಾಳು. ಈ ಮಾತುಗಳು ಹಿಂದೆ ಹೇಳಿರುವುದಕ್ಕೆ ಸರಿಹೋಗಲ್ಲ. ಇಂಥ scene ನಲ್ಲಿ, ಇಂಥ ವಾಕ್ಯ ಹೊಡೆದು ಹಾಕಿ, ಅದರ ಬದಲು ಹೀಗೆ ಬರೆದುಕೋ. ಆಗ ಸರಿಹೋಗುತ್ತೆ." ಅಂತ ಜ್ಞಾಪಕದಿಂದಲೇ ಹೇಳಿದ್ದನ್ನ ನಾನು ಕೇಳಿದ್ದೆ.

ಶ್ರೀ ಕೈಲಾಸಂ ಜೀವನದಲ್ಲಿ ಏಕೆ ಹೆಚ್ಚು ವಿಶ್ವಾಸ ಹೊಂದಿರಲಿಲ್ಲ ಅನ್ನುವುದು ಗೊತ್ತಿಲ್ಲ. ಸಂಕಲ್ಪ ವಿಹೀನತೆ ಅವರ ಜೀವನಕ್ಕೆ ಹೊಂದಿಹೋಗಿತ್ತು. ಒಂದು ರೀತಿಯಲ್ಲಿ ಒಬ್ಬ ಸನ್ಯಾಸಿಯಂತೆಯೇ ಅವರ ಜೀವನ. ಎಲ್ಲಿದ್ದರೆ ಅಲ್ಲೆ ಸರಿ. ಎಲ್ಲಿಗೆ ಬಿಟ್ಟರೆ ಅಲ್ಲಿಗೇ ಕೊನೆ. ಸಿಗರೇಟು ಮಾತ್ರ ಯಾವಾಗಲೂ ಉರಿಯುತ್ತಿರಬೇಕು. ಜಿನ್ ಅಥವ ರಮ್ ಜೊತೆಗಿರಬೇಕು. ಒಂದು ಸಾರಿ ಏನೋ ಮಾತಾಡುತ್ತಾ ಗಾಂಧಿಜೀಯವರ ವಿಷಯ ಬಂತು. ಗಾಂಧೀಜಿಯವರನ್ನ ನೆನೆಸಿಕೊಂಡರೆ ಶ್ರೀ ಕೈಲಾಸಂ ತುಂಬ ಗೌರವ ವ್ಯಕ್ತಪಡಿಸುತ್ತಿದ್ದರು. ಮಾತಾಡುತ್ತಾ "Gandhiji is an example, but I am a warning" ಅಂತ ಬಹಳ ಅರ್ಥಗರ್ಭಿತವಾಗಿ ಹೇಳಿದರು. ಅವರ ಉಡಿಗೆ ಸರಳ. ಬೊಂಬಾಯಿನಲ್ಲಿದ್ದಾಗ ಅವರೇ ಹೇಳಿದಂತೆ ಒಂದು Club ಗೆ ಹೋಗಿದ್ದರಂತೆ. ಇವರ ಹಳೆ ಕೋಟನ್ನು ಹಾಕಿಕೊಂಡಿದ್ದರಂತೆ. ಅಲ್ಲಿ ಕೆಲವರು Billiards ಆಡುತ್ತಿದ್ದರಂತೆ. ಶ್ರೀ ಕೈಲಾಸಂರವರು ಇಂಗ್ಲೆಂಡಿನಲ್ಲಿ 6-7 ವರ್ಷ ಇದ್ದು, billiards ಆಡಲು ಚೆನ್ನಾಗಿಯೇ ಕಲಿತಿದ್ದರು. ಇವರೂ ಒಂದೆರಡು ಆಟ ಆಡಲು ಅವಕಾಶ ಕೇಳಿಕೊಂಡು ಆಡಿದರಂತೆ. ಇವರ ಹೆಚ್ಚು ಮಟ್ಟದ ಆಟ ನೋಡಿ ಕ್ಲಬ್ಬಿನ ಸದಸ್ಯನೊಬ್ಬ "He is a gentleman after all" ಅಂತ ಶ್ರೀ ಕೈಲಾಸಂರವರಿಗೆ ಕೇಳುವಂತೆ ಅಂದನಂತೆ. ಕೋಪದಿಂದ ಶ್ರೀ ಕೈಲಾಸಂ ತಕ್ಷಣವೇ "My friend, I am a gentleman before all!" ಅಂತ ಬಾಯಿ ಮುಚ್ಚಿಸಿದರಂತೆ.

ಶ್ರೀ ಕೈಲಾಸಂ ಮೈಸೂರಿನಲ್ಲಿ ಇದ್ದಾಗ ಶ್ರೀ V. S. Srinivas Sastry ಅವರ ಒಂದು ಭಾಷಣ ನಮ್ಮ ಕಾಲೇಜಿನಲ್ಲಿ ಏರ್ಪಟ್ಟಿತ್ತು. ಶ್ರೀ ಶಾಸ್ತ್ರಿಯವರ ರಾಜಕೀಯದ ಬಗ್ಗೆ ಜನಗಳಲ್ಲಿ ಸ್ವಲ್ಪ ಅವಿಶ್ವಾಸವಿತ್ತು. ಆದರೂ ಶ್ರೀ ಶಾಸ್ತ್ರಿಗಳು ಭಾಷಣಕ್ಕೆ ಒಪ್ಪಿದ್ದರು. ಶ್ರೀ ಶಾಸ್ತ್ರಿಯವರ ವಿಷಯವಾಗಿ ಶ್ರೀ ಕೈಲಾಸಂರವರಿಗೆ ತುಂಬ ಗೌರವ. ಇಂಗ್ಲಿಷ್ ಭಾಷೆಯಲ್ಲಿ ಇಂಡಿಯಾ ದೇಶದಲ್ಲೆಲ್ಲಾ ಸರಿಯಾಗಿ ಮಾತಾಡುವ ಶಕ್ತಿ ಇರುವುದು ಇವರೊಬ್ಬರಿಗೆ ಅಂತ ಅವರ ಅಭಿಪ್ರಾಯವಿತ್ತು. ಅವರನ್ನ ಕಂಡರೆ ಕೈಲಾಸಂಗೆ ಗುರುಭಾವನೆ ಇತ್ತು. ಶ್ರೀ ಶಾಸ್ತ್ರಿಗಳ ಭಾಷಣ ಕೇಳಲು ಕೈಲಾಸಂ ನಮ್ಮ ಜೊತೆ ಬಂದರು. ಶ್ರೀ ಶಾಸ್ತ್ರಿಗಳು ಬರುವ ದಾರಿಯನ್ನೇ ನೋಡುತ್ತಿದ್ದು, ಅವರು ಬಂದ ಕೂಡಲೇ ಎಲ್ಲರೂ ನೋಡುತ್ತಿರುವಂತೆ ಅವರ ಕಾಲುಗಳಿಗೆ ನಮಸ್ಕರಿಸಿದರು. ಈ ದೃಶ್ಯವನ್ನು ನಾನೆಂದಿಗೂ ಮರೆಯಲಾರೆ. ಪ್ರತಿಭಾವಂತರೂ, ಇಂಗ್ಲಿಷ್ ಭಾಷಾಜ್ಞಾನದಲ್ಲಿ ಪಂಡಿತರೂ ಆದ ಶ್ರೀ ಕೈಲಾಸಂ, ಒಬ್ಬ ಚಿಕ್ಕ ವಿದ್ಯಾರ್ಥಿಯಂತೆ ಶ್ರೀ ಶಾಸ್ತ್ರಿಗಳ ಕಾಲಿಗೆ ನಮಸ್ಕರಿಸಿದ್ದು, ಅವರ ನಿಗರ್ವತೆ, ಸರಳತೆ ಮತ್ತು ಶ್ರೀ ಶಾಸ್ತ್ರಿಗಳಲ್ಲಿಟ್ಟಿದ್ದ ಅಪಾರ ಗೌರವವನ್ನು ಸೂಚಿಸುತ್ತದೆ. ಶ್ರೀ ಶಾಸ್ತ್ರಿಗಳು ಕೈಲಾಸಂರವರನ್ನ ಮೇಲೆಕ್ಕೆತ್ತಿ, "You are here!" ಅಂತ ಅವರನ್ನ ಅಪ್ಪಿಕೊಂಡು, ಕುಶಲ ಪ್ರಶ್ನೆ ಕೇಳಿ, ಆಮೇಲೆ ವೇದಿಕೆಯ ಮೇಲೆ ಹೋದರು.

ಶ್ರೀ ಕೈಲಾಸಂರವರ ಗರ್ವರಹಿತ ಸರಳತೆ, ನಮಗೆ ಆದರ್ಶವಾಗಬೇಕು. ಇಂಥ ಒಬ್ಬ ಅಪರೂಪ ವ್ಯಕ್ತಿಯ ಪರಿಚಯ ನನಗಾದದ್ದು ಜೀವನದ ಒಂದು ಮರೆಯಲಾಗದ ಅವಕಾಶ ಅಷ್ಟೆ. ಶ್ರೀ ಕೈಲಾಸಂ ಇನ್ನೂ ಮೈಸೂರಿನಲ್ಲಿದ್ದಾಗಲೇ, ನನ್ನ ಓದು ಮುಗಿದು, ಮೈಸೂರನ್ನು ಬಿಡಲಾಗದ ಮನಸ್ಸಿನಿಂದ ಬಿಟ್ಟೆ. ಶ್ರೀ ಕೈಲಾಸಂರವರ ನೆನಪು ನನ್ನ ಮನಸ್ಸಿನಲ್ಲಿ ಇನ್ನೂ ಹಸಿರಾಗಿಯೇ ಉಳಿದಿದೆ.

# ಕೃ ತ ಜ್ಞ ತೆ

ಈ ಪುಸ್ತಕ ಬೇಗನೆ ಅಚ್ಚಾಗಿ ಹೊರಬರಲು ದಾನ ನೀಡಿ ಸಹಕರಿಸಿದವರಲ್ಲಿ ಪ್ರಮುಖರು :—

(1) ಶ್ರೀ ವೈ. ಎಂ. ನರಸಿಂಹಮೂರ್ತಿ, ಡೈರೆಕ್ಟರ್ ಮತ್ತು ಜನರಲ್ ಮ್ಯಾನೇಜರ್, ಇಂಟರ್ ನ್ಯಾಷನಲ್ ಎಂಡ್ ಬಯಲಾಜಿಕಲ್ ಇನ್ಸ್ಟಿಟ್ಯೂಟ್ ಬಸವನಗುಡಿ—೪ (ಕುರಸೋಲ್ ತಯಾರಿಕರು) ರೂ. 150.

(2) ಮೈಸೂರು ಸರ್ಕಾರದ ಸೆಕ್ರೆಟೇರಿಯಟ್ ಕ್ಲಬ್ಬಿನವರು ರೂ. 50.

# ಹೊಸ ಹೊದಿಕೆ ಹೊತ್ತು ಹೊರಬಂದಿರುವ
# ಕೈಲಾಸಂ ಹೊತ್ತಿಗೆಗಳು

ಟೊಳ್ಳುಗಟ್ಟಿ (ಭಾಗ ೧) ★ ವೈದ್ಯನ ವ್ಯಾಧಿ, ★ ಬಹಿಷ್ಕಾರ ಪೋಲೀ ಕಿಟ್ಟೀ ★ ಬಂಡವಾಳವಿಲ್ಲದ ಬಡಾಯಿ ★ ಹೋಂ ರೂಲು ಅಮ್ಮಾವ್ರ ಗಂಡ ★ ಸತ್ತವನ ಸಂತಾಪ ★ ಅನುಕೂಲಕ್ಕೊಬ್ಬಣ್ಣ ತಾವರೆಕೆರೆ ★ ಸೀಕರ್ಣೆ ಸಾವಿತ್ರಿ ★ ತಾಳಿಕಟ್ಟೋಕೂಲೀನೇ ನಮ್ ಬ್ರಾಹ್ಮಣಿಕೆ ★ ನಮ್ ಕಂಪ್ನಿ ★ ಸೂಳೆ ★ ನಮ್ಕ್ಳ ಬಸ್ಸು ಶಂಬರನ ಶೃಂಗಾರ ★ ಏಕಲವ್ಯ ("ಪರ್ಪಸ್"ನ ಕನ್ನಡ ಅನುವಾದ)

ಇಂಗ್ಲಿಷಿನಲ್ಲಿ: ಪರ್ಪಸ್ ★ ಲಿಟಲ್ ಲೇಸ್ ಎಂಡ್ ಫ್ಲೇನ್

ಕರ್ಣ ,, ಕೀಚಕ

## ಜಿ. ಪಿ. ರಾಜರತ್ನಂ ಅವರ

★ ಕೈಲಾಸಂ ನೆನಪು ಮತ್ತು ಕೈಲಾಸ ಕಥನ

★ ಏಕಲವ್ಯ (ಕೈಲಾಸಂ ಅವರ 'ಪರ್ಪಸ್' ನಾಟಕದ ಸಾರವಿಸ್ತಾರ)

ಬೆಂಗಳೂರಿನಲ್ಲಿ :

★ ಗೀತಾ ಏಜೆನ್ಸೀಸ್, ಬಳೇಪೇಟೆ

★ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ
ನರಸಿಂಹರಾಜಾ ಕಾಲೋನಿ

★ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್
ಬಿ. ಪಿ. ವಾಡಿಯಾ ರಸ್ತೆ, ಬಸವನಗುಡಿ

★ ಮಹಿಳಾ ಕಾರ್ಮಿಕರ ಕೋ-ಆಪರೇಟಿವ್ ಸೊಸೈಟಿ
ಹನುಮಂತನಗರ

★ ಕೈಲಾಸಂ ಅಭಿಮಾನಿಗಳ ಕೂಟ
ಬಿ. ಕೆ. ಮರಿಯಪ್ಪ ಹಾಸ್ಟೆಲ್, ಚಾಮರಾಜಪೇಟೆ

★ ಗಾಂಧಿ ಸಾಹಿತ್ಯ ಸಂಘ, ಮಲ್ಲೇಶ್ವರ

ಮೈಸೂರಿನಲ್ಲಿ :

★ ಗೀತಾ ಬುಕ್ ಹೌಸ್, ನ್ಯೂ ಸ್ಟ್ಯಾಚ್ಯೂ ಸರ್ಕಲ್

ಈ ಸಂಸ್ಥೆಗಳಿಂದ ಮೇಲಿನ ಕೃತಿಗಳನ್ನು ಬೆಲೆಗೆ ಪಡೆಯಬಹುದು.